# ಶಾನುಬೋಗಿ

ತಿಂಗಳ ಪತ್ರಿಕೆ ಡಿಸೆಂಬರ್ 1994

- ರೋಜಾ ಮತ್ತು ಭಾರತೀಯ ರಾಷ್ಟ್ರೀಯತೆ
- ರಾಜ್ಯಮಟ್ಟದ ಸ್ವಾಯತ್ತ ಅಧಿವೇಶನ
- ಪಂಚಮ ಪತ್ರಿಕೆಯ ಎರಡು ಬರಹಗಳು
- ಸ್ತ್ರೀವಾದಿ ಸಾಹಿತ್ಯ ವಿಮರ್ಶಾ ಗೋಷ್ಠಿ
- ಮುಸುಕಿನೊಳಗಿನ ಅಳು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 10 ಸಂಚಿಕೆ : 11

ಡಿಸೆಂಬರ್ - 1994

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

**ಈ ಸಂಚಿಕೆಯಲ್ಲಿ...**



ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

ಹೊಸದಾಗಿ ಆಯ್ಕೆಯಾಗಿ ಬಂದ ಸರ್ಕಾರ ಮಹಿಳೆಯರ ಅಭಿವೃದ್ಧಿಯನ್ನು ಕೇಂದ್ರವನ್ನಾಗಿ ಇಟ್ಟುಕೊಂಡು ಒಂದು ಆಯೋಗವನ್ನು ರಚಿಸುವ ತೀರ್ಮಾನವನ್ನು ತೆಗೆದುಕೊಂಡಿದೆ. ಶಾಸನ ಬದ್ಧವಾಗಿ ಸ್ತ್ರೀಯರಿಗಿರುವ ಹಕ್ಕು ಬಾಧ್ಯತೆ, ಸವಲತ್ತುಗಳನ್ನು ಜಾರಿಗೆ ತರಲು ಸರ್ಕಾರಕ್ಕೆ ಸಲಹೆ ನೀಡುವ ಉದ್ದೇಶದಿಂದ ಈ ಆಯೋಗವನ್ನು ರಚಿಸಲಾಗುತ್ತದೆಯಲ್ಲದೆ, ಸ್ತ್ರೀಯರ ಮೇಲೆ ನಡೆಯುವ ಹಿಂಸೆ ಹಾಗೂ ದೌರ್ಜನ್ಯ ಮುಂತಾದವುಗಳನ್ನು ಕುರಿತು ಸರ್ಕಾರಕ್ಕೆ ಮಾಹಿತಿ ನೀಡುವುದು ಸಹ ಆಯೋಗ ರಚನೆಯ ಉದ್ದೇಶ.

ಮಹಿಳೆಯರ ಸಮಸ್ಯೆಗಳಿಗೆ ಸಂಬಂಧಪಟ್ಟ ಹಾಗೆ ಸರ್ಕಾರಗಳು ಆಯೋಗಗಳನ್ನು ರಚಿಸುವುದು ಹೊಸದೇನಲ್ಲ. ಆದರೆ ಇಂತಹ ಆಯೋಗಗಳು ಕೇವಲ ನಾಮಕಾವಸ್ಥೆಗೆ ರಚನೆಯಾಗಿ, ಹೇಳಿಕೆಯ ಹಂತದಲ್ಲಿ ಉಳಿದು ಬಿಡುತ್ತವೆ. ಇಂತಹ ಉದ್ದೇಶಗಳು ಪ್ರಾಮಾಣಿಕ ಕಾಳಜಿಯಿಂದ ಕೂಡಿದ ಪ್ರಯತ್ನವಾದರೆ ಇದರಿಂದ ಸ್ತ್ರೀಯರ ಸ್ಥಿತಿ - ಗತಿಯ ನೈಜಚಿತ್ರಣ ಸರ್ಕಾರಕ್ಕೆ ದೊರೆಯಲಿದೆ.

ಆದರೆ ಪ್ರಸ್ತುತ ವ್ಯವಸ್ಥೆಯಲ್ಲಿ ಈ ಸಲಹೆಗಳನ್ನು ಪಡೆಯುವ ಮಾರ್ಗಗಳು ಇಲ್ಲವೆ? ಮಹಿಳೆಯರ ಕಲ್ಯಾಣಕ್ಕೆ ಸಂಬಂಧಪಟ್ಟ ಇಲಾಖೆಗಳು, ನಿಗಮಗಳು ಈ ದಿಶೆಯಲ್ಲಿ ಏನು ಮಾಡುತ್ತಿವೆಯೆನ್ನುವ ಪ್ರಶ್ನೆ ಉಂಟಾಗುವುದು ಸಹಜ.

ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ಇಂದಿಗೂ ನಿರ್ಲಕ್ಷಿತರು. ಸ್ತ್ರೀಯರ ಅಭಿವೃದ್ಧಿಯನ್ನು ಕಡೆಗಾಣಿಸಿ ರಾಜ್ಯದ ಅಭಿವೃದ್ಧಿಯನ್ನು ಸಾಧಿಸುವುದು ಅಸಾಧ್ಯ. ಮಹಿಳೆಯರು ವಿಶೇಷವಾಗಿ ಗ್ರಾಮೀಣ ಮಹಿಳೆಯರ ಅಭಿವೃದ್ಧಿಗಾಗಿ ಸರ್ಕಾರ ನಿಜವಾಗಿ ಕಣ್ಣನ್ನು ಬಿಡಬೇಕಾಗಿದೆ. ಸ್ತ್ರೀಯರಿಗೆ ಶಾಸನ ಬದ್ಧವಾಗಿ ಇರುವ ಹಕ್ಕು ಬಾಧ್ಯತೆಗಳನ್ನು ನೇರವಾಗಿ ದೊರಕಿಸಿ ಕೊಡುವ ಹಾಗೂ ದೊರಕಿಸಿ ಕೊಡಲು ಇರುವ ಅಡ್ಡಿ ಆತಂಕಗಳನ್ನು ಕುರಿತು ವಸ್ತುನಿಷ್ಠ ಸಲಹೆ ನೀಡುವ ಆರೋಗ್ಯಪೂರ್ಣ ಕೆಲಸವನ್ನು ಇಂತಹ ಆಯೋಗಗಳು ಮಾಡಬೇಕಾಗಿದೆ.

# ರೋಜಾ ಮತ್ತು ಭಾರತೀಯ ರಾಷ್ಟ್ರೀಯತೆ

ಭಾರತೀಯ ರಾಷ್ಟ್ರೀಯತೆ ಮತ್ತು ದೇಶಪ್ರೇಮವನ್ನೇ ವಸ್ತುವನ್ನಾಗಿಸಿ ಹಣ ಮಾಡಹೊರಟ ಜನಪ್ರಿಯ ನಿರ್ದೇಶಕ ಮಣಿರತ್ನಂ ಅವರ 'ರೋಜಾ' ಎನ್ನುವ ಸಿನೆಮಾ ತುಂಬಾ ಯಶಸ್ಸು ಗಳಿಸಿತು. ಅದಕ್ಕೆ ಭಾರತ ಸರ್ಕಾರದಿಂದ ರಾಷ್ಟ್ರೀಯ ಸಮಗ್ರತಾ ಪ್ರಶಸ್ತಿಯೂ ದೊರೆಯಿತು. ಒಟ್ಟಾರೆಯಾಗಿ ಎಲ್ಲ ವರ್ಗಗಳ ಪ್ರೇಕ್ಷಕರ ಅಪಾರ ಮೆಚ್ಚುಗೆಗೆ ಪಾತ್ರವಾದ ಈ ಸಿನೆಮಾ ಮುಂದಿನ ದಿನಗಳಲ್ಲಿ ವ್ಯಾಪಕ ಚರ್ಚೆಗೂ ಒಳಪಟ್ಟಿತು. ಈ ಸಿನೆಮಾದಲ್ಲಿ ಪ್ರಕಟಗೊಳ್ಳುವ 'ದೇಶಪ್ರೇಮ', ಭಾರತೀಯ ರಾಷ್ಟ್ರೀಯತೆಯ ಕಲ್ಪನೆಗಳ ಅಪಾಯಗಳನ್ನು ಅನೇಕ ಚಿಂತಕರು ಆತಂಕದಿಂದಲೇ ಹೇಳತೊಡಗಿದರು Econamic and political - weekly ಪತ್ರಿಕೆಯು 94 ರಾದ್ಯಂತ ಇದರ ಬಗ್ಗೆ ವಿವಿಧ ಚಿಂತಕರ ವಾದ-ವಿವಾದಗಳನ್ನು ಹೊರತಂದಿತು.

ತೇಜಸ್ವಿನಿ ನಿರಂಜನ ಅವರು Integrating whose Nation ? Tourists and Terrorists in 'Roja' ಎನ್ನುವ ತಮ್ಮ ವಿಚಾರಪೂರ್ಣ ಲೇಖನದಲ್ಲಿ, ಈ ಸಿನೆಮಾದಲ್ಲಿ ಆಧುನಿಕ ಮಧ್ಯಮ ವರ್ಗದಿಂದ ಪ್ರಭುತ್ವದ ನಿರಾಕರಣೆಯಾಗಿದೆ. ಮಂಡಲ್ ವಿರೋಧೀ, ಗ್ಯಾಟ್ ಪರವಾದ ಈ ನವಭಾರತೀಯ ಪಶ್ಚಿಮದ ವಿರೋಧಿಯಲ್ಲ. ಜೀನ್ಸ್ ಪ್ಯಾಂಟು, ಟೀಶರ್ಟ್‌ಗಳಲ್ಲಿ ಭಾರತ ಮಾತಾಕೀ ಜೈ ಎನ್ನುವ ಆತನ ದೇಶಪ್ರೇಮ ಮುಸ್ಲಿಂ ವಿರೋಧಿ. ಹೀಗಾಗಿ ಆಧುನಿಕತೆಯ ವಿರೋಧಿ, ರಾಷ್ಟ್ರ ವಿರೋಧಿಯೂ, ಭಾರತೀಯ ವಿರೋಧಿಯೂ ಆಗಿರುತ್ತಾನೆ. ಉರಿಯುತ್ತಿರುವ ಭಾರತದ ಬಾವುಟ ತನ್ನನ್ನು ಕೊಟ್ಟುಕೊಂಡು ಬೆಂಕಿ ಹಚ್ಚಿಕೊಳ್ಳುವ ಇಲ್ಲಿನ ನಾಯಕ ರಿಷಿಕುಮಾರ ಈ ಎಲ್ಲ ಕಲ್ಪನೆಗಳ ಪ್ರತಿನಿಧಿ. ಕಾಶ್ಮೀರದಂತಹ ಸಮಸ್ಯೆಯನ್ನು ಬಗೆಹರಿಸಲು ಪ್ರಭುತ್ವದಿಂದ ಸಾಧ್ಯವಿಲ್ಲ, ಲಿಯಾಖತನಂತಹವರ ಮನಸ್ಸನ್ನು ಪರಿವರ್ತಿಸಬಲ್ಲ ರಿಷಿಕುಮಾರನಂತಹ ಒಬ್ಬೊಬ್ಬ ನವಮಧ್ಯಮವರ್ಗಿಯಿಂದಲೇ ಅದು ಸಾಧ್ಯ. ಹೀಗಾಗಿ ರಿಷಿಕುಮಾರನ ದೇಶಪ್ರೇಮ ಪ್ರಭುತ್ವ ಕೇಂದ್ರಿತವಲ್ಲ. ಇಲ್ಲಿ ಪ್ರಭುತ್ವ ಎಲ್ಲ ರೀತಿಗಳಲ್ಲೂ ಸೋತಿದೆ-ಅದಕ್ಕೆ ಉಗ್ರಗಾಮಿಗಳನ್ನು ಸೋಲಿಸಲು ಸಾಧ್ಯವಿಲ್ಲ, ತನ್ನ ನೌಕರರನ್ನೂ ಕಾಪಾಡಲು ಸಾಧ್ಯವಿಲ್ಲ. ಹೀಗಾಗಿ ಇಂತಹ ಪ್ರಭುತ್ವದ ಸೋಲಿನಲ್ಲಿ ಉದಾರೀಕರಣ, ಮುಕ್ತ ಮಾರುಕಟ್ಟೆಯ ಪರವಾಗಿ ಮಧ್ಯಮ ವರ್ಗಕ್ಕೆ ಅದನ್ನೂ ತಿರಸ್ಕರಿಸಲು ಸಮರ್ಥನೆ ದೊರೆಯುತ್ತದೆ ಎಂದು ವಾದಿಸಿದ್ದರು. ರೋಜ ಎನ್ನುವ ನಾಯಕಿ ಇವೆಲ್ಲದರ ಒತ್ತಾಸೆಯಾಗಿಯಷ್ಟೇ ಪ್ರಕಟಗೊಳ್ಳುತ್ತಾಳೆ ಎಂಬುದು ತೇಜಸ್ವಿನಿಯವರ ನಿಲುವು.

ತೇಜಸ್ವಿನಿಯವರ ಈ ಲೇಖನಕ್ಕೆ ಪ್ರತಿಕ್ರಿಯಿಸುತ್ತಲೇ ವಿಭಿನ್ನ ನೆಲೆಯಿಂದ ತಮ್ಮ ವಾದವನ್ನು ಪ್ರಕಟಿಸಿದ MSS Pandyan ಮತ್ತು Venkatesh chakravarthy ಇವರುಗಳು, ಇಡೀ ಸಿನೆಮಾ ಹೇಗೆ ಪ್ರಭುತ್ವದ ಕಾರ್ಯವನ್ನು ಮತ್ತು ಮಹಿಳೆಯರ ಆಧುನೀಕರಣವನ್ನು ಬಯಲಿಗೆಳೆಯಲು ನಿರಾಕರಿಸುತ್ತದೆ ಮತ್ತು ತನ್ಮೂಲಕ ಪ್ರಭುತ್ವ ಮತ್ತು ಪಿತೃಪ್ರಧಾನ ಶಕ್ತಿಗಳು ಹೇಗೆ ಒಟ್ಟಾದ ಗೆಲುವನ್ನು ಸಾಧಿಸುತ್ತವೆ ಎಂದು ಬಲವಾಗಿ ವಾದಿಸಿದ್ದಾರೆ, ವೈಯಕ್ತಿಕ ಹಂತದಲ್ಲಿ ರಿಷಿಕುಮಾರನ ಆಶಯಗಳಿಗೆ ಬೆಸೆದುಕೊಂಡಿರುವ ನಾಯಕಿ ರೋಜ ಮತ್ತು ಉಗ್ರಗಾಮಿಗಳ ಆಶಯ ರಾಜಕೀಯವಾಗಿ ಅಂದರೆ (ವಾಸಿಂಖಾನನ ಬಿಡುಗಡೆ ಬೇಡುವಲ್ಲಿ) ಹೇಗೆ ಒಂದೇ ಆಗಿದೆ ಮತ್ತು ಇವರಿಬ್ಬರ (ಉಗ್ರಗಾಮಿಗಳು ಮತ್ತು ರೋಜಾ) ಆಶಯಗಳಿಗೆ ಸೋಲಾಗುವ ಮೂಲಕ ಪ್ರಭುತ್ವ ಮತ್ತು ಪಿತೃಪ್ರಧಾನತೆಗಳು ಹೇಗೆ ಗೆಲುವು ಸಾಧಿಸಿವೆ ಎಂದು ತೋರಿಸಿಕೊಡುವ 'ರೋಜಾ ಕುರಿತು ಇನ್ನಷ್ಟು' (EPW, Mar 12 ) 94 ಅಧಿಕಾರದ ಸ್ಥಾಪನೆಯೇ ಪ್ರಭುತ್ವದ ಅಧಿಕಾರದ ಪುನರ್ ಸ್ಥಾಪನೆಯೇ ಪ್ರಭುತ್ವದ ಅಧಿಕಾರದ ಪುನರ್ ಸ್ಥಾಪನೆಗೆ ಇಂಬುಕೊಡುವಂತದ್ದು ಎನ್ನುವ ಫ್ನಕೋನ ವಿಚಾರವನ್ನು ಇಲ್ಲಿಗೆ ಅನ್ವಯಿಸಿರುವ ಅವರ ರೀತಿ ಕುತೂಹಲಕಾರಿಯಾದದ್ದು.

**ವಿ. ಗಾಯತ್ರಿ**

## ರೋಜಾ ಕುರಿತು ಇನ್ನಷ್ಟು

● ವೆಂಕಟೇಶ ಚಕ್ರವರ್ತಿ, ಎಂ.ಎಸ್.ಎಸ್. ಪಾಂಡ್ಯನ್

ತೇಜಸ್ವಿನಿ ನಿರಂಜನ ಅವರ "ಯಾರ ದೇಶದ ಸಮಗ್ರಗೊಳಿಸುವಿಕೆ ?–ರೋಜಾದಲ್ಲಿನ ಪ್ರವಾಸಿಗರು ಮತ್ತು ಭಯೋತ್ಪಾದಕರು"(EPW ಜನವರಿ 15) ಎಂಬ ಬರಹ ಮಣಿರತ್ನಂ ಅವರು ಸಮಸ್ಯೆಯೊಂದನ್ನು ಗ್ರಹಿಸುವ ಕ್ರಮವನ್ನು ಹಿಡಿದಿಡುವಲ್ಲಿ ಮತ್ತು ಇಂದು ನಮ್ಮಲ್ಲಿ ಕಂಡುಬರುತ್ತಿರುವ ಪ್ರಭಲ ಸಿನೆಮಾ–ಪ್ರವೃತ್ತಿಗಳ ಸಂದರ್ಭದಲ್ಲಿ ಮುಖ್ಯವಾಗುವ ಹಲವು ಪ್ರಶ್ನೆಗಳನ್ನು ಎತ್ತುವಲ್ಲಿ ಮಹತ್ವದ್ದಾಗಿದೆ. ಈ ಪ್ರಶ್ನೆಗಳು ರಾಷ್ಟ್ರೀಯ ಆವಶ್ಯಕತೆಯ ಕಟ್ಟುವಿಕೆ, ಚರಿತ್ರೆಯ ಏಕಮುಖೀಕರಣ ಮಹಿಳೆಯರ ಆಧುನೀಕರಣ, ಸಿನೆಮಾದ ವಸ್ತುವಿನೊಳಕ್ಕೆ ಪ್ರೇಕ್ಷಕರನ್ನು ಸೆಳೆದುಕೊಳ್ಳುವಿಕೆ ಮತ್ತು ಬೇರೆ ಚರಿತ್ರೆಯನ್ನು ಕಟ್ಟಲು ಅಥವಾ ಬೇರೆ ಕತೆಯನ್ನು

ಹೇಳಲು ಇರುವ ಎಲ್ಲ ಸಾಧ್ಯತೆಗಳನ್ನು ಅಳಿಸಿಹಾಕುವ ಇಂತಹ ಸೆಳೆಕೊಳ್ಳುವಿಕೆಯ ಕೌರ್ಯ ಮುಂತಾದ್ದ ಅಂಶ ಗಳಿಗೆ ಸಂಬಂಧಿಸಿವೆ.

ರೋಜಾ ಮಧ್ಯಮವರ್ಗದ ಆಶಯುಗಳನ್ನು ಎತ್ತಿ ಹಿಡಿಯುತ್ತದೆನ್ನುವ ತೇಜಸ್ವಿನಿಯವರ ವಾದವನ್ನು ನಾವು ಮರುಮಾತಿಲ್ಲದೆ ಒಪ್ಪುವೆವಾದರೂ ಆಕೆ ತನ್ನ ಮುಂದುವರೆದ ಚರ್ಚೆಗಳಲ್ಲಿ ಸಿನೆಮಾದಲ್ಲಿನ ಬೇರೆ ಬೇರೆ ಅಂಶಗಳ ಆಧಾರದ ಮೇಲೆ ಇಲ್ಲಿ ಪ್ರಭುತ್ವ (State)ದ ನಿರಾಕರಣೆ ಮತ್ತು ಸೋಲು ಉಂಟಾಗಿದೆ ಎಂದು ಹೇಳು ವುದನ್ನು ಒಪ್ಪಲು ನಮಗೆ ಕಷ್ಟವಾಗುತ್ತದೆ. ವ್ಯತಿರಿಕ್ತ ವಾಗಿ, ಸಿನೆಮಾದಲ್ಲಿ ಕಂಡುಬರುವ ಪ್ರಭುತ್ವದ ಎದ್ದು ಕಾಣುವ ಅಸಾಮರ್ಥ್ಯ, ಅದರ ಮೌನವಾದ ಮತ್ತು ಅಪಾರ ಶಕ್ತಿಶಾಲಿಯಾದ ಸಾಮರ್ಥ್ಯವನ್ನು ಮರೆಮಾಚು ತ್ತದೆ, ಮುಸುಕಿನಡೆಗೆ ಸರಿಸುತ್ತದೆ, ಮತ್ತು ಸಿನೆಮಾ ದಲ್ಲಿ ಅಂತಿಮವಾಗಿ ಜಯಶಾಲಿಗಳಾಗುವದೆಂದರೆ, ಅದರ ನಾಯಕ ರಿಶಿಕುಮಾರನು ತುಂಬಾ ಹೊಂದಿಕೊಳ್ಳುವ ಪ್ರಭುತ್ವ ಮತ್ತು ಹಿಂದೂ ಪಿತೃಪ್ರಧಾನ ಸಂಸ್ಕೃತಿಗಳೇ ಎಂಬುದು ನಮ್ಮ ವಾದ. ನಮಗೆನ್ನಿಸುವುದೆಂದರೆ ಇಡೀ ಸಿನೆಮಾ ಪ್ರಭುತ್ವದ ಕೌರ್ಯವನ್ನು ಮತ್ತು ಮಹಿಳೆ ಯರ ಆಧುನೀಕರಣವನ್ನು ಎತ್ತಿತೋರಿಸಲು ನಿರಾಕರಿ ಸುತ್ತದೆ. ಇಂತಹ ನಿರಾಕರಣೆಯ ಮೂಲಕ ಪ್ರಭುತ್ವಕ್ಕೆ ಸೋಲಾಗುವ ಬದಲು ಅಂಗೀಕಾರ ದೊರೆತಿದೆ. ಈ ಉದ್ದೇಶ ಸಾಧನೆಗಾಗಿಯೇ ಕಥನವು ರಿಶಿಕುಮಾರನ ಆಶೋತ್ತರಗಳನ್ನು ಎತ್ತಿ ಹಿಡಿಯುತ್ತಾ ನಾಯಕಿ ರೋಜಾ ಮತ್ತು 'ಭಯೋತ್ಪಾದಕರು'ಗಳ ಆಶಯು ಗಳನ್ನು ಬದಿಗೆ ಸರಿಸಿದೆ. ಇದೆಲ್ಲವನ್ನು ವೈರುಧ್ಯ ಸಾಂದ್ರೀಕರಣ (Condensation) ಮತ್ತು ಸ್ಥಾನಾಂತರ (Displacement)ಗಳ ಪ್ರಕ್ರಿಯೆಯಲ್ಲಿ ಮಾಡಲಾಗಿದೆ. *

**ವೈರುಧ್ಯ ಸಾಂದ್ರೀಕರಣ** (Condensation) :

ಮೊದಲಿಗೆ ನಾವು ಸಿನೆಮಾ ಹೆಣೆಯಲ್ಪಟ್ಟಿರುವ ಚೌಕಟ್ಟನ್ನು ಗಮನಿಸುವಾ. ಸಂಗ್ರಹಿಸಿ ಹೇಳಲು ಸಹಾಯವಾಗುವಂತೆ ನಾವು ನಿರ್ಧಿಷ್ಟ ಪಾತ್ರಗಳ ಸಂದರ್ಭದಲ್ಲಿ ಮಾಡಲಾಗಿರುವ ವೈರುಧ್ಯ ಸಾಂದ್ರೀಕರಣ ದಲ್ಲಿ ಗಮನ ಕೇಂದ್ರೀಕರಿಸಿಕೊಳ್ಳೋಣ. ವೈರುಧ್ಯ ಸಾಂದ್ರೀಕರಣ ಎನ್ನುವುದು ಪರಸ್ಪರ ವೈರುಧ್ಯ ಹೊಂದಿರುವ ಎರಡು ಮಹತ್ವದ ಅಂಶಗಳ ಅತಾರ್ಕಿಕ ಬೆಸುಗೆಯಾಗಿರುತ್ತದೆ.

**ರೋಜ** : ಪ್ರಾರಂಭದಲ್ಲಿ ಆಕೆ ಬಯಕೆಗಳಿಂದ ತುಂಬಿ ತುಳುಕುತ್ತಿರುತ್ತಾಳೆ. ತನ್ನಷ್ಟಕ್ಕೇ ಖುಷಿಯಿಂದಿರು ತ್ತಾಳೆ. ಆದರೆ ತನ್ನ ಮದುವೆಯಲ್ಲಿ ಅವಳಿಗೆ ಆಯ್ಕೆಯ ಅವಕಾಶವಿಲ್ಲ. ಪ್ರಪಂಚವನ್ನು ತಲೆಕೆಳಗು ಮಾಡಿ ಯಾದರೂ ಕಾಶ್ಮೀರೀ ಉಗ್ರಗಾಮಿಗಳಿಂದ ತನ್ನ ಗಂಡ ನನ್ನು ತಂದರೆ ಮಾತ್ರ ಈಗವಳಿಗೆ ತನ್ನ ಕುಷಿಗೆ ಮರಳಲು ಸಾಧ್ಯ. ಅಂತಿಮವಾಗಿ ಅಸಾಧಾರಣ ಹೆಂಗಸಂತೆ, ಭಾರತೀಯ-ಹಿಂದೂ ಮಹಿಳೆಯಂತೆ ಆಕೆ ತನ್ನ ಗಂಡನ ಪದತಲದಲ್ಲಿ ನೆಮ್ಮದಿ ಕಾಣುತ್ತಾಳೆ.

**ರಿಷಿಕುಮಾರ್** : ಹಳ್ಳಿ ಹುಡುಗಿಯನ್ನು ಹಾಸಿಗೆಗೆ ಸೆಳೆದುಕೊಳ್ಳಲು ಬಯಸುವ ಒಬ್ಬ ಸಾಧಾರಣ ಆಂಗ್ಲೀ ಕರಣಗೊಂಡ ಮಧ್ಯಮ ವರ್ಗದ ಪಟ್ಟಣದ ಗಂಡಸ ರಂತಲ್ಲದ ಈತ ಅವಳನ್ನು ಮದುವೆಯಿಂದ ಕೂಡುತ್ತಾನೆ.

---

* ವೈರುದ್ಯ ಸಾಂದ್ರೀಕರಣ (condensation) ಮತ್ತು ಸ್ಥಾನಾಂತರ (displacement) ಎನ್ನುವ ಪರಿಕಲ್ಪನೆಗಳನ್ನು ಫ್ರಾಯ್ಡನು ತನ್ನ ಕನಸುಗಳ ವಿಶ್ಲೇಷಣೆಯಲ್ಲಿ ಮೊದಲ ಬಾರಿಗೆ ಬಳಸಿದನು. ಎಚ್ಚರಿಕೆಯಿಂದಿರುವ ಕಣ್ಣುಗಳನ್ನು ಮೋಸ ಗೊಳಿಸಲು ಎರಡು ವಿರುದ್ಧ ಮಹತ್ವಗಳುಳ್ಳ ಅಂಶಗಳನ್ನು ಅದು ಒಟ್ಟಿಗೆ ಬೆಸೆಯುತ್ತದೆ (ವೈರುದ್ಯ ಸಾಂದ್ರೀಕರಣ) ಇಲ್ಲವೇ ಒಂದು ಮಹತ್ವದ ಅಂಶವನ್ನು ಸಂಪೂರ್ಣ ಭಿನ್ನ ಅಥವಾ ವಿರುದ್ಧವಾದ ಇನ್ನೊಂದು ಮಹತ್ವದ ಅಂಶದಿಂದ ಸ್ಥಾನೀಕರಿಸುತ್ತದೆ. (displcement). ವೈರುದ್ಯ ಘನೀಕರಣ ಮತ್ತು ಸ್ಥಾನಾಂತರಗಳು ಸಂಪೂರ್ಣ ತಾಳೆ (coincidence)ಯನ್ನು ಸೃಷ್ಟಿಸು ತ್ತವೆ. ಅವು ಕೇವಲ ಅತಿಪ್ರಜ್ಞಾವಸ್ಥೆಯಲ್ಲಿ ಕನಸುಗಳಲ್ಲಷ್ಟೇ ಕೆಲಸ ಮಾಡುವುದಿಲ್ಲ. ಪ್ರಜ್ಞಾಪೂರಕ ಫ್ಯಾಂಟಸಿಗಳಲ್ಲಿ, ನಾಲಿಗೆ ತಪ್ಪಿಬಂದ ಮಾತುಗಳಲ್ಲಿ, ತಾತ್ಪರ್ಯಗಳಲ್ಲಿ, ಜೋಕುಗಳಲ್ಲಿ ಯೆಲ್ಲಾ ಕೆಲಸ ಮಾಡುತ್ತದೆ. ಮೂಲತಃ ಅವು ಕಲ್ಪನಾತ್ಮಕ ವಾದುದಾಗಿದ್ದು ಆ ಕಾರಣಕ್ಕಾಗಿಯೇ ಅತಾರ್ಕಿಕವಾದುದಾಗಿರುತ್ತವೆ. ಅಂದರೆ ಅವು ಯಾವುದೇ ಕಾರಣ ಅಥವಾ ಲಯಗಳಿಲ್ಲ ದೆಯೇ ಒಂದು ಮಹತ್ವದ ಅಂಶವನ್ನು ಮತ್ತೊಂದರೊಂದಿಗೆ ಬೆಸೆಯುತ್ತವೆ ಮತ್ತು ಈ ಪ್ರಕ್ರಿಯೆಯಲ್ಲಿ ತೇಪೆಗಳನ್ನು ಮುಚ್ಚಿ ಹಾಕುತ್ತವೆ.

ಇದೇ ರೀತಿಯ ಆಪ್ತತೆ ಅವನಿಗೆ ಹಳ್ಳಿಯ ವಯಸ್ಸಾದ ಆದರ್ಶಸತಿಯರಲ್ಲಿ. ವೃತ್ತಿಯಲ್ಲಿ ಉನ್ನತಿ ಸಾಧಿಸಲು ಏನನ್ನೂ ಮಾಡಲು ಸಿದ್ಧನಿರುವ ಹೃದಯಹೀನ ತಂತ್ರಜ್ಞನಾಗಿರದೆ ಬದ್ಧ ರಾಷ್ಟ್ರೀಯವಾದಿಯೂ ಮತ್ತು ತ್ಯಾಗದ ಪ್ರತೀಕನೂ ಆಗಿದ್ದಾನೆ. ಈತ ಉರಿಯುತ್ತಿರುವ ಸ್ಟೌವಿನ ಬೆಂಕಿಯಿಂದ ನೇರವಾಗಿ ನಿರುದ್ವಿಗ್ನತೆಯಿಂದ ಸಿಗರೇಟು ಹಚ್ಚಿಕೊಳ್ಳಬಲ್ಲ ಮತ್ತು ಅಷ್ಟೇ ನಿರುದ್ವಿಗ್ನನಾಗಿ ಉರಿಯುತ್ತಿರುವ ಭಾರತ ಬಾವುಟಕ್ಕೆ ತನ್ನನ್ನು ಕೊಟ್ಟುಕೊಳ್ಳಬಲ್ಲ. ಸಲ್ಲದ ಶಕ್ತಿಗಳಿಂದ ಅದರ ಪಾವಿತ್ರ್ಯ ಕಾಪಾಡುವಲ್ಲಿ ತನ್ನ ದೇಹದ ಭಾಗವನ್ನೇ ಸುಟ್ಟುಕೊಳ್ಳಬಲ್ಲ. ಅವನೊಬ್ಬ ಅಹಂಕಾರೀ ತಮಿಳನಲ್ಲ, ಅಹಂಕಾರೀ ಭಾರತೀಯ. ಸ್ಥಳೀಯತೆಯನ್ನು ಮೀರಲು ಈತ ಬಯಸುತ್ತಾನೆ. ಆದರೆ ಕಟ್ಟುನಿಟ್ಟಿನ ರಾಷ್ಟ್ರೀಯತೆಯನ್ನು ಮೈತುಂಬಿಕೊಂಡವನಂತೆ ಕಾಣುತ್ತಾನೆ. ಉಗ್ರಗಾಮಿ ಲಿಯಾಖತನ ಸುಂದರಿ ತಂಗಿಯ ಸಾಮೀಪ್ಯದಿಂದ ಅವನಲ್ಲಿ ಬಯಕೆಗಳೇನೂ ಹುಟ್ಟುವುದಿಲ್ಲ, ಆದರೆ ಇದೇ ಬಯಕೆಯನ್ನು ತನ್ನ ಹೆಂಡತಿಯಲ್ಲಿ ಅಂಕುರಿಸಿಕೊಂಡು "ಕಾದಲ್ ರೋಜಾವೇ...." ಎಂದು ಹಾಡುತ್ತಾನೆ. ಈತ ಅಹಿಂಸಾವಾದಿ. ಆದರೆ ಬೇರೆ ದಾರಿಯೇ ಇಲ್ಲದಾಗ ಹಿಂಸಾ ಸ್ವರೂಪನಾಗುತ್ತಾನೆ. ತನಗೆ ನ್ಯಾಯಯುತವಲ್ಲದೆಂದು ಕಂಡದ್ದನ್ನು ನಿಷ್ಕ್ರಿಯಗೊಳಿಸುವ ಪ್ರಭುತ್ವ (state) ದೊಂದಿಗೆ ಇಲ್ಲಿ ಈತ ಒಂದಾಗಿದ್ದಾನೆ. ಜಾತಿಯಿಂದ ಬ್ರಾಹ್ಮಣೇತರ ಮೇಲ್ಜಾತಿ ಪಿಳ್ಳೆಯಾದ ಇವನ ಎಲ್ಲಾ ಕಾಳಜಿ ಇರುವುದು ಕಾಶ್ಮೀರೀ ಪಂಡಿತರ ನೆಲೆಯನ್ನು ಕಾಪಾಡುವಲ್ಲಿ. ಕಾಶ್ಮೀರೀ ಮುಸ್ಲಿಮರನ್ನು ಸುಧಾರಣೆ ಮಾಡುವಲ್ಲಿ ಈತ ಉದ್ಯುಕ್ತನಾಗುತ್ತಾನೆಯೇ ವಿನಃ ಅವರೇಕೆ ಬಿಡುಗಡೆ ಬಯಸುತ್ತಾರೆ ಎಂಬುದನ್ನು ತಿಳಿದುಕೊಳ್ಳುವ ಆಸಕ್ತಿ ಇವನಿಗಿಲ್ಲ. ಈ ಎಲ್ಲದರ ಜತೆಗೆ ಮಾಹಿತಿ ಒಡೆದುಕೊಂಡೂ ಯಾವುದೇ ಕಷ್ಟವಿಲ್ಲದೆ ಈತ ಜೈಹಿಂದ್ ಎಂದು ಕೂಗು ಹಾಕಬಲ್ಲ.

**ವಾಸಿಮ್ ಖಾನ್ :** ಇವನೊಬ್ಬ ಪಿಡುಗಾಗಿ ಉಗ್ರಗಾಮಿ, ಪ್ರಭುತ್ವದಿಂದ ಹಿಂಸಾತ್ಮಕ ರೀತಿಯಲ್ಲಿ ಮೂಲೆಗೆ ತಳ್ಳಲ್ಪಟ್ಟಿದ್ದಾನೆ. ಆದರೂ ಪ್ರಭುತ್ವ ತನ್ನನ್ನು ಹಿಂಸಿಸಿಯೇ ಇಲ್ಲವೇನೋ ಎನ್ನುವಂತೆ ಅಚಲನಾಗಿ ಕಂಡುಬರುತ್ತಾನೆ.

**ಲಿಯಾಖತ್ :** ಇವನೊಬ್ಬ ತಮಿಳನಲ್ಲದಿದ್ದರೂ ಕೊಯಮತ್ತೂರಿನಲ್ಲಿ ಬಿ.ಎಸ್ಸಿ. ಅಗ್ರಿಕಲ್ಚರ್ ಓದಿದವನಾದದ್ದರಿಂದ ತಮಿಳು ಬಲ್ಲವನಾಗಿದ್ದು ತಮಿಳನಂತೆ ಕಾಣುತ್ತಾನೆ. ಅವನದು ಹಿಂಸಾ ಪ್ರವೃತ್ತಿ ಆದರೆ ಕಟ್ಟಾಧಾರ್ಮಿಕ. ಕಲ್ಲಿನಂತೆ ಕಠಿಣ ಆದರೆ ಪರಿವರ್ತಿತನಾಗುವಷ್ಟು ಮೃದು. ತನ್ನ ಗುರಿಯಿಂದ ದೂರ ಸರಿಯದ, ಬದ್ಧನಾದ ಕಾಶ್ಮೀರಿ ಇವನಾದರೂ ವಾಸಿಂ ಖಾನನಿಗೆ ರಿಷಿಯನ್ನು ಬದಲಾಯಿಸಿಕೊಳ್ಳಲು ನಿರಾಕರಸಿ ತನ್ನ ಸೋಲನ್ನು ಕಂಡುಕೊಳ್ಳುವಷ್ಟರ ಮಟ್ಟಿಗೆ ಊಹೆಗೆ ನಿಲುಕದ ಪ್ರವೃತ್ತಿಯವ. ಇವನು ಕಟ್ಟಾ ಸ್ಥಳೀಯವಾದಿ, ಆದರೆ ಅಹಿಂಸಾತ್ಮಕ ರಾಷ್ಟ್ರಿಯವಾದಿಯಾಗಿಸುಧಾರಣೆಗೊಳ್ಳಬಲ್ಲಂತಹವನು. ಮೊದಲಿಗೆ ಪಾಕಿಸ್ತಾನದ ಕಡೆಗಿರುವನಾದರೂ, ವಿಚಿತ್ರವೆಂದರೆ, ರಿಷಿ ಪ್ರಭುತ್ವದ ಹಿತಾಸಕ್ತಿಯಲ್ಲಿ ಬಿಡಿಸುವ ಕೋಡಿನಲ್ಲಿ ಇವನಿಗೆ ಆಸಕ್ತಿಯಿಲ್ಲ.

**ಲಿಯಾಖತನ ಸೋದರಿ :** ಈಕೆ 'ಉಗ್ರವಾದಿ'ಯ ತಂಗಿ, ಆದರೆ ಸುಂದರಾಂಗ ರಿಷಿಕುಮಾರನಲ್ಲಿ ಮೋಹಗೊಳ್ಳದಿರಲು ಇವಳಿಗೆ ಸಾಧ್ಯವಿಲ್ಲ. ಇವಳು ಹೆಂಗುಸಾದ್ದರಿಂದ ಉಗ್ರಳಾಗಿರದೆ ಸುಕೋಮಲೆಯಾಗಿದ್ದಾಳೆ. ಹೀಗಾಗಿ ಸಮಸ್ಯೆಯಿರುವುದು, ರಾಷ್ಟ್ರೀಯವಾದಿ ಪುರುಷರ ಬಯಕೆಗಳಿಗೆ ವಸ್ತುವಾಗಬೇಕಾಗಿರುವ ಕಾಶ್ಮೀರಿ ಹೆಂಗಸರಲ್ಲಿಯಲ್ಲ ಕೇವಲ ಕಾಶ್ಮೀರೀ ಗಂಡಸರಲ್ಲಿ.

**ರೋಯಪ್ಪ ಮತ್ತು ಸೈನ್ಯಾಧಿಕಾರಿ :** ರೋಯಪ್ಪ ನಮ್ಮ ಮಹಾಸೇನಾನಿ ಕಾರಿಯಪ್ಪನಂತವನು. ಸದಾ ಕಾಲವೂ ಕಟ್ಟುನಿಟ್ಟಿನ ಕರ್ತವ್ಯಪಾಲನೆಯಲ್ಲಿ ತೊಡಗಿಗಿರುವ ಈತ ಪ್ರಭುತ್ವದ ಅವಶ್ಯಕತೆಗಳನ್ನು ಪೂರೈಸುವ ತರಾತುರಿಯಲ್ಲಿರುವವನು. ಹೀಗಿದ್ದು ಇವನ ಗರಿಮುರಿಯಾದ ಯೂನಿಫಾರಂ ಕೆಳಗಡೆ ಸಹೃದಯ ಮಾನವ ಪ್ರಾಣಿಯೊಂದಿರುವುದರಿಂದ ರೋಜಾಳಿಗೆ ಅವಳ ಗುರಿ ಸಾಧನೆಯಲ್ಲಿ ಸಹಾಯ ಮಾಡಲು ಸಮಯ ಹೊಂದಿಸಿಕೊಳ್ಳುತ್ತಾನೆ. ನಿಷ್ಕ್ರಿಯಗೊಳಿಸುವ ಪ್ರಭುತ್ವದ ನಿಜ ಪ್ರತಿನಿಧಿಯಾದ ಈತ ರಕ್ಷಿಸುವ ತಂದೆಯೂ ಹೌದು.

**ರಿಷಿಯ ಬಾಸ್ :** ಮೂಲದಲ್ಲಿ ಕ್ರಿಪ್ಟಿಕ್ ಕೋಡ್ ಅನ್ನು ಬಿಡಿಸುವಲ್ಲಿಯೇ ಮಗ್ನ ಈತ. ಆದರೆ ಕಾಹಿಲೆ ಬಿದ್ದಾಗ ಎಲ್ಲವನ್ನು ರಿಷಿಗೆ ವಹಿಸುವುದರಿಂದ ಮುಂದೆ

ರಿಷಿಯೇ ತಂದೆಯ ಹೆಸರಿನಲ್ಲಿ ಕೆಲಸ ಮಾಡುತ್ತಾ ಆದರ ಸಂಬಂಧದ ಎಲ್ಲಅಧಿಕಾರವನ್ನೂ ಪಡಕೊಳ್ಳುತ್ತಾನೆ. ತನ್ನ ಹಳ್ಳಿಯ ವೈಭವವನ್ನು ಹೇಳಿಕೊಳ್ಳುವಷ್ಟು ನಾಸ್ಟಾಲ್ಜಿಕ್ ಆದರೂ, ರಿಷಿಗೆ ರೋಜಾಳನ್ನು ಕಾಶ್ಮೀರಕ್ಕೆ ಕರೆದು ಕೊಂಡು ಹೋಗುವಂತೆ ಒತ್ತಾಯಿಸುವಲ್ಲಿಯೆಲ್ಲ ಭವಿಷ್ಯದ ಕಲ್ಪನೆಯೇ ಇರದವನಂತೆ ವರ್ತಿಸುತ್ತಾನೆ.

**ಶತ್ರು :** ಪ್ರಾರಂಭದಲ್ಲಿ ಯಾರ ಕ್ರಿಪ್ಟಿಕ್ ಕೋಡನ್ನು ರಿಷಿ ಬಿಡಿಸಿದ್ದಾನೆ ಎಂದು ಹೇಳದೇ ಹೋಗುವುದರಿಂದ ಒಂದು ಬಗೆಯ ನಿಗೂಢತೆ ಇರುತ್ತದೆ. ಕೊನೆಗೆ 'ಉಗ್ರ ಗಾಮಿ'ಗಳ ಸೋದರನಂತಹ ಪಾಕಿಸ್ತಾನ ಅದು ಎಂಬುದು ಅರಿವಾಗುತ್ತದೆ. ಆ ಕಡೆಯಲ್ಲಿ ಸೋದರರಿಗೆ ಗುಂಡಿಕ್ಕಿ ದಾಗ, ಶತ್ರುವು, ಪ್ರಭುತ್ವ ಮತ್ತು 'ಉಗ್ರಗಾಮಿ' ಗಳಿಬ್ಬರ ಶತ್ರುವೂ ಆಗುತ್ತಾನೆ ಒಂದೇ ಸಮಯದಲ್ಲಿ.

**ಕೇಂದ್ರ ಮಂತ್ರಿ :** ರಾಷ್ಟ್ರೀಯ ಪ್ರಾಮುಖ್ಯತೆಯ ವಿಷಯಗಳಲ್ಲಿ ಈತ ತುಂಬಾ ಬಿಸಿ. ಆದರೆ ತನ್ನ ಪ್ರೋಟೋಕಾಲ್ ಮುರಿದು ರೋಜಾಳ ಅಹವಾಲಿಗೆ ಕಿವಿ ಗೊಡುವಷ್ಟು ಸಮಯ ಮತ್ತು ಮನಸ್ಸು ಈತನಿಗಿದೆ.

ನಾವು ಇಲ್ಲಿ ಮುಖ್ಯವಾಗಿ, ಇಡೀ ಸಿನೆಮಾದಲ್ಲಿ ಪ್ರಭುತ್ವದ ಕೌರ್ಯದ ನಿರಾಕರಣೆಯನ್ನು ಸಾಧಿಸಲು ಸಾಧ್ಯವಾಗುವಂತೆ ಕಟ್ಟಲ್ಪಟ್ಟಿರುವ ತಂದೆಯಂತಹ ರಕ್ಷಕ ಸ್ವರೂಪೀ ಪಾತ್ರಗಳನ್ನು ಮತ್ತು ಕಂಟಕಪ್ರಾಯರಾದ ಶತ್ರು (ಕಾಶ್ಮೀರದ ಉಗ್ರಗಾಮಿಗಳು ಪಾಕಿಸ್ತಾನ)ಗಳ ವಿರುದ್ಧ ಇವುಗಳನ್ನು ವ್ಯವಸ್ಥಿತವಾಗಿ ಹೊಸೆದಿರುವ ರೀತಿಯನ್ನು ತೋರಿಸಲಿಕ್ಕಾಗಿ ಈ ಬಗೆಯ ವೈರುಧ್ಯಾತ್ಮಕ ಅಂಶಗಳು ಮತ್ತು ಅವುಗಳ ಸಾಂದ್ರೀಕರಣವನ್ನು ಪಟ್ಟಿ ಮಾಡಿದ್ದೇವೆ. ಈ ಅಂಶವನ್ನು ವಿಸ್ತರಿಸುವ ಮುನ್ನ ವೈರುಧ್ಯ ಸಾಂದ್ರೀಕರಣದ ಜತೆಗೆ ಡಯಲೆಕ್ಟಿಕ್ ಸಂಬಂಧ ವನ್ನು ಹೊಂದಿರುವ ಸ್ಥಾನಾಂತರ (Displacement) ದತ್ತ ಗಮನ ಹರಿಸುವುದು ಮುಖ್ಯವಾಗುತ್ತದೆ. ನಾವು ಅಡಿಟಿಪ್ಪಣಿಯಲ್ಲಿ ಹೇಳಿರುವಂತೆ, ಒಂದು ಮಹತ್ವದ ಅಂಶದಿಂದ ಇನ್ನೊಂದಕ್ಕೆ ತೀವ್ರತೆಯನ್ನು ಪಲ್ಲಟಗೊಳಿ ಸುವುದೇ ಸ್ಥಾನಾಂತರ. ಇದು ಆಕಸ್ಮಾತ್ತಾಗಿ ಉಂಟಾಗುವ ಸಹಸಂಬಂಧೀ ಸನ್ನಿವೇಶಗಳ ಸಹಾಯ ದಿಂದ ಆಗುತ್ತದೆ. ಸ್ಥಾನಾಂತರವನ್ನು ನೋಡಬೇಕಾ ದರೆ ನಾವು ಒಂದು ದೃಶ್ಯ ಮತ್ತೊಂದಕ್ಕೆ ಕೊಂಡಿ ಬೆಳೆಸಿ ಕೊಳ್ಳುತ್ತಾ ಹೋಗುವ ಕ್ರಮೇಣ ಬದಲಾವಣೆಯ ಕ್ರಿಯೆಯನ್ನು ಗಮನಿಸಬೇಕಾಗುತ್ತದೆ. ಹೀಗೆ ಕೊಂಡಿ ಬೆಳೆಸುವ ಕ್ರಿಯೆಯಲ್ಲಿಯೇ ಕೆಲವು ನಿದರ್ಶನ ಸ್ವರೂಪೀ ಮೌನಗಳನ್ನು, ಹಾರಿಕೆಗಳನ್ನು ಮತ್ತು ಇಲ್ಲವಾಗಿಸುವಿಕೆ ಗಳನ್ನು ಮರೆಮಾಚಿರುವುದು. ವೈರುಧ್ಯಾತ್ಮಕ ಅಂಶಗಳ ಸಾಂದ್ರೀಕರಣ ಯಾವಾಗಲೂ ತನ್ನಷ್ಟಕ್ಕೆ ಆಗಿಬಿಡುವು ದಿಲ್ಲ, ಸ್ಥಾನಾಂತರವೇ ಇದರ ಕೆಲಸವನ್ನು ಸರಾಗ ಗೊಳಿಸುವುದು. ವೈರುದ್ಯ ಸಾಂದ್ರೀಕರಣದ ಮತ್ತು ಸ್ಥಾನಾಂತರದ ಪ್ರಕ್ರಿಯೆಗಳು ಈ ಸಿನೆಮಾದಲ್ಲಿ ಹೇಗೆ ಪ್ರಭುತ್ವದ ಯಶಸ್ಸನ್ನು ನಿರಾಕರಿಸುವ ಬದಲು ಪ್ರತಿಪಾದಿಸುತ್ತವೆ ಎಂದು ಈಗ ನಾವು ವಿಶ್ಲೇಷಿಸೋಣ.

**ಸ್ಥಾನಾಂತರ :** ಸಿನಿಮಾದಲ್ಲಿ ಶೀರ್ಷಿಕೆಗಳ ಸಾಲಿನಲ್ಲಿ ಕೊನೆಯದಾಗಿ ಬರುವುದೇ ಮಣಿರತ್ನಂ ಅವರ ಹೆಸರು. ಅದು ಬರುತ್ತಿದ್ದಂತೆಯೇ ಹಿನ್ನಲೆಯಲ್ಲಿ ಮಸೀದಿಯಲ್ಲಿನ ಪ್ರಾರ್ಥನೆಯ ದೂರದ ಸ್ವರ ಕೇಳಿಬರುತ್ತದೆ. ನಂತರ ಪೈನ್ ಮರಗಳ ಕಾಡಿನ ಮಧ್ಯ ಕಣ್ಣು ಕೋರೈಸುವ ಕಾವಲು ದೀಪಗಳುಳ್ಳ ದಿಗಿಲು ಹುಟ್ಟಿಸುವ ಟ್ರಕ್ಕು ಪ್ರವೇಶಿಸುತ್ತದೆ. ಈಗ ಸಿನಿಮಾ ಲಿಯಾಖತ್ ಮತ್ತು ಆತನ ಅನುಚರರ ಕಡೆ ಹೊರಳುತ್ತದೆ, ಪ್ರೇಕ್ಷರಲ್ಲಿ ಅವರೆಡೆಗೆ ಅನುಭೂತಿ ಮೂಡುವ ರೀತಿಯಲ್ಲಿ. ಪಂಕಜ್ ಕಪೂರ್‌ನ ಪ್ರವೇಶ ಇಂತಹ ಅನುಭೂತಿಗೆ ಪೂರಕವಾಗು ತ್ತದೆ. ಈ ಸನ್ನಿವೇಶದಲ್ಲಿ ವಾಸಿಂಖಾನ್ ತನ್ನ ಟೆಂಟಿನಿಂದ ಹೊರಬರುತ್ತಾನೆ. ಉಳಿದವರಿಗಿಂತ ಎತ್ತರಕ್ಕಿದ್ದು ಬೊಕ್ಕತಲೆಯವನಾದ ಈತನ ಆಕಾರವೇ ಈತನನ್ನು ಇತರರಿಂದ ಪ್ರತ್ಯೇಕಗೊಳಿಸುತ್ತದೆ, ಅಪಾಯಕಾರಿಯಾಗಿ ಸುತ್ತದೆ. ಇದ್ದಕ್ಕಿದಂತೆ ಈಗ ನಾಯಿ ಬರುವುದರಿಂದ ಪ್ರೇಕ್ಷಕರಿಗೆ ಗಮನ ಕೇಂದ್ರೀಕರಿಸಲು ವಸ್ತುವೊಂದು ಸಿಕ್ಕಂತಾಗಿ ವಿಷಯದಿಂದ, ಅಂದರೆ ಆ ನಾಯಿ ಬೆನ್ನು ಹತ್ತಿರುವ ವಾಸಿಂಖಾನ್‌ನಿಂದ ದೂರ ಸರಿಯುತ್ತೇವೆ. ಬೇಗದರಲ್ಲೇ ಬೇರೆಲ್ಲರೂ ತಪ್ಪಿಸಿಕೊಳ್ಳುತ್ತಾರೆ. ಆದರೆ ನಮ್ಮೆಲ್ಲರಿಗೂ ತೃಪ್ತಿಯಾಗುವ ರೀತಿಯಲ್ಲಿ ವಾಸಿಂಖಾನ್ ಸಿಕ್ಕಿಬಿದ್ದು ಅವನನ್ನು ಅವನ ಪ್ರಪಂಚದಿಂದ ಕೊಂಡೊಯ್ಯಲಾಗುತ್ತದೆ. ಇಲ್ಲಿ ಪ್ರತಿಮೆ ಘನೀಕರಿಸ ಲ್ಪಡುತ್ತದೆ ಮತ್ತು ಹೀಗೆ ಘನೀಕರಣಕೊಂಡ ವಾಸಿಂಖಾನನ ಪ್ರತಿಮೆಯ ಮೇಲೆ ಆತ ಸೆರೆಯಾದ ಸುದ್ದಿ ಮುದ್ರಣಗೊಳ್ಳುತ್ತದೆ. ನಾವಿಲ್ಲಿ ಅನಿವಾರ್ಯವಾಗಿ ಜೀನ್‌ಲುಕ್ ಗೋಡಾರ್ಡ್‌ನ, ಚಿನ್ಹೆಯಿಂದ ವಸ್ತುವಿನ

ಕೊಲೆ, ಎನ್ನುವ ಹೇಳಿಕೆಯನ್ನು ನೆನಪಿಸಿಕೊಳ್ಳಲೇಬೇಕಾಗುತ್ತದೆ. ಒಮ್ಮೆ ಹೀಗೆ ಆಗಿಹೋಗಿಬಿಟ್ಟ ವಾಸಿಂಖಾನ್ ನಂತರ ಮಡಿಲ ನಾಯಿಯಂತೆ ಮೆತ್ತಗಾಗುತ್ತಾನೆ. ತನ್ನ ಗಂಟಿನಿಂದ ಭಯಹುಟ್ಟಿಸುವ ರೀತಿಯಲ್ಲಿ ಹೊರನಡೆದು ಬರುವಾಗ ಮತ್ತು ಜೈಲಿನ ಕಂಬಿಯ ಹಿಂದೆ ಕ್ರೂರವಾಗಿ ಓಡಾಡುತ್ತಾ ರೋಜಾಗಳೆಡೆಗೆ ಕೂಗಾಡುವಾಗ ಅವನಲ್ಲಿ ಒಂದು ಬಗೆಯ ಶಕ್ತಿ ಮೈಗೂಡಿಕೊಂಡಂತ್ತಿರುತ್ತದೆ. ಒಟ್ಟಾರೆಯಲ್ಲಿ, ಕಾಶ್ಮೀರದ ಶುಭ್ರ ಕಾಡನ್ನು ತನ್ನಲ್ಲೇ ಇಟ್ಟುಕೊಳ್ಳಬಯಸುವ ಭಾರತ ಮಾತೆಯ ಬೆದರಿಕೆ ಒಡ್ಡುವ ಮಗನೀತ. ಹೀಗಾಗಿ ಈತನನ್ನು ಮೊಳಕೆಯಲ್ಲೇ ಚಿಗುಟಿ ಹಾಕುವುದರಲ್ಲಿ ಒಂದು ಬಗೆಯ ಆಕ್ರಮಣಕಾರೀ ಸುಖವಿದೆ. ವಾಸಿಂಖಾನನು ಸೆರೆಯಾದ ನಂತರ ಕಥನದ ತರ್ಕಕ್ಕನುಸಾರ ಸೈನ್ಯಾಧಿಕಾರಿಗಳು ಅವನನ್ನು ಹಿಂಸಿಸುವುದನ್ನು ತೋರಿಸಬೇಕಾಗಿತ್ತು. ಅದಕ್ಕೆ ಬದಲಾಗಿ ನಮ್ಮ ಗಮನವನ್ನು ದಕ್ಷಿಣದ ಕೊನೆಯ ಮನೋಹರ ಸ್ಥಳವೊಂದಕ್ಕೆ ಸ್ಥಾನಾಂತರಗೊಳಿಸಿಬಿಟ್ಟು ಮೇಲಿನ ಸಾಧ್ಯತೆಯನ್ನು ಕೈಬಿಡಲಾಗುತ್ತದೆ. ಅದಕ್ಕೆ ಪ್ರತಿಯಾಗಿ, ಹಿಂದಿನ ಭೀಕರ ಸನ್ನಿವೇಶದಿಂದ ನಮಗೆ ಸ್ವಲ್ಪ ಬಿಡುವು ಕೊಡುವ ರೀತಿಯಲ್ಲಿ ಸೂರ್ಯನ ಬೆಚ್ಚನೆಯ ಹೊಂಗಿರಣಗಳು ಮತ್ತು ಅದರಿಂದತೊಯ್ದ ರೋಜಾಳ ದೇಹ ನಮ್ಮ ನೋಟವನ್ನು ಆವರಿಸಿಕೊಳ್ಳುತ್ತವೆ. ಅಹಿತವೆನಿಸುವ ಪೈನ್‌ಗಿಡಗಳೊಂದೂ ಇರದ ವಿಸ್ತಾರ ಬಾಂದಳದಲ್ಲಿ ಈಗ ಪ್ರೇಕ್ಷಕರಾದ ನಮ್ಮೊಟ್ಟಿಗೆ ಉಳಿಯುವುದು ರೋಜಾ ಮಾತ್ರ. ಒಟ್ಟಿನಲ್ಲಿ ಪ್ರಾರಂಭದಲ್ಲಿ ಪ್ರಭುತ್ವದ ಕಾರ್ಯಶೀಲತೆಯಲ್ಲಿ ಕಂಡುಬರುವ ಕಾರ್ಯ ಪುನಃ ನೇರವಾಗಿ ವ್ಯಕ್ತಗೊಳ್ಳುವುದೇ ಇಲ್ಲ. ವೈರುಧ್ಯ ಸಾಂದ್ರೀಕರಣಗಳ ಪಟ್ಟಿಯಲ್ಲಿ ನಾವು ಪೇರಿಸಿರುವಂತೆ ತದನಂತರದಲ್ಲಿ ಪ್ರಭುತ್ವವನ್ನು ಪ್ರತಿನಿಧಿಸುವ ರೋಯಪ್ಪ ಮತ್ತು ಕೇಂದ್ರ ಮಂತ್ರಿಗಳೇ ಮುಂತಾದ ರಕ್ಷಿಸುವ ತಂದೆಯಂತಹ ಚಿತ್ರಗಳು ಬರುತ್ತವೆ. ಆದರೆ ದಮನಕಾರಿಗಳಾಗ ನಿಷ್ಕ್ರಿಯಗೊಳಿಸುವ ತಂದೆಗಳು ಪುನಃ ಬರುತ್ತಲೇ ಇರುತ್ತವೇ ಕಾವಲು ನಾಯಿಯಂತಹ ಸೈನ್ಯದ ರೂಪದಲ್ಲಿ ಇಲ್ಲವೆ, ರೋಜಾ ವಾಸಿಂಖಾನ್‌ನನ್ನು ಭೇಟಿಯಾಗಲು ಹೋಗುವಾಗ ಬರುವ ಭೀಕರ ಟ್ರಕ್ಕುಗಳ ಶಬ್ದ ಮತ್ತು ಬೆಳಕಿನ ರೂಪದಲ್ಲಿ. ಇಲ್ಲಿ ನಮ್ಮ ಗಮನ ರೋಜಾಳೆಡೆಗೆ ಎಷ್ಟು ತೀವ್ರವಾಗಿ ಸ್ಥಾನಾಂತರಿಸಲ್ಪಡುತ್ತದೆಯೆಂದರೆ ಪರ್ವತ ಪ್ರದೇಶದ ಮಧ್ಯದಲ್ಲಿ ತೀರಾ ಅಸಹಜವಾಗಿ ನಿಂತಿರುವ ಜೈಲನ್ನು ನಾವು ನೋಡುವುದೇ ಇಲ್ಲ. ಇವೆಲ್ಲವನ್ನು ನಾವು ಕೇವಲ ಆ ದೃಶ್ಯದಲ್ಲಿನ ಸುತ್ತಮುತ್ತಲ ಅಮುಖ್ಯ ವಿವರಗಳಂತಷ್ಟೇ ನೋಡುತ್ತೇವೆ. ವಾಸಿಂಖಾನನನ್ನು ಕಂಡು ರೋಜಾಳಷ್ಟೇ ಹೆದರಿಬಿಟ್ಟಿರುವ ನಮಗೆ ಇವೆಲ್ಲ ನಿಜವಾಗಿ ಏನನ್ನು ಹೇಳುತ್ತವೆ ಎಂದು ನೋಡುವುದು ಸಾಧ್ಯವಾಗುವುದೇ ಇಲ್ಲ.

ತನ್ನ ಹತ್ತಿಕ್ಕಲಾಗದ ಬಯಕೆಗಳನ್ನು ಹಾಡಿನ ಮೂಲಕ ಹೊಮ್ಮಿಸುತ್ತಲೇ, ರೋಜಾ ನಮ್ಮನ್ನು ಮೊಟ್ಟಮೊದಲಿಗೆ ಸಂಧಿಸುತ್ತಾಳೆಯಾದರೂ ಆ ಹಾಡೇ ಅವಳ ಬಯಕೆಗಳಲ್ಲಿರಬಹುದಾದ ಅಪಾರ ಸಾಮರ್ಥ್ಯವನ್ನು ಬಿಂಬಿಸುತ್ತದೆ. ಆದರೆ ಮುಂದಿನ ದೃಶ್ಯದಲ್ಲಿಯೇ ನಮ್ಮ ಗಮನವನ್ನು ಸ್ಥಾನಾಂತರಿಸಿಕೊಂಡ ರಿಷಿಕುಮಾರನ ಆಕ್ರಮಣಕಾರೀ ನೋಟದಲ್ಲಿ ಆಕೆ ಸಿಕ್ಕಿ ಬೀಳುತ್ತಿದ್ದಂತೆ ಅವಳ ಇಂತಹ ಸಾಮರ್ಥವೆಲ್ಲ ಕ್ರಮೇಣವಾಗಿ ಹತ್ತಿಕ್ಕಲ್ಪಡುತ್ತದೆ, ಮೌನಗೊಳ್ಳುತ್ತದೆ. ಇದಾದ ನಂತರ, ಹೀಗೆ ಸಿಕ್ಕಿಬಿದ್ದದ್ದರಿಂದ ಆಕೆಗಾದ ಲಾಭವೇನು ಎಂದು ಹೇಳುವುದನ್ನು ಮುಂದೂಡುತ್ತಲೇ ಹೋಗುವ ಸಿನೆಮಾ ಬೇರೆ ಎಲ್ಲೆಲ್ಲಿಗೋ ಸೆಳೆದುಕೊಳ್ಳುತ್ತಾ ಹೋಗಿ ಕ್ರಮೇಣ ಅದನ್ನು ಪೂರ್ಣವಾಗಿ ಹಿಂದಕ್ಕೆ ಸರಿಸಿಬಿಡುತ್ತದೆ. ಕೊನೆಗೆ, ತನ್ನಷ್ಟಕ್ಕೇ ಪ್ರಕಟಗೊಂಡ ಅವಳ ಬಯಕೆಗಳೇನಾದವು ಎಂಬ ಜಿಜ್ಞಾಸೆಯಲ್ಲಿ ನಮ್ಮ ಆಸಕ್ತಿ ಕರಗಿ ರಿಷಿಕುಮಾರನ ಬಯಕೆಯೊಡನೆ ಅವಳದ್ದು ಸರಿದೂಗಿಕೊಳ್ಳುವುದೇ ಎಂಬ ಆತಂಕ–ಕುತೂಹಲಗಳು ಹುಟ್ಟಿಕೊಳ್ಳುತ್ತವೆ. ಅವರ ಮದುವೆ ನಮಗೆ ಇಂತಹ ಆಶ್ವಾಸನೆ ಕೊಡುತ್ತದೆ. ಏಕೆಂದರೆ ಇಂತಹ ಏಕಾಏಕಿ ತಿರುವುಗಳಿಗೆ ರೋಜಾ ಇನ್ನೂ ಹೊಂದಿಕೊಂಡಿರುವುದಿಲ್ಲ, ಅವರ ಒಂದಾಗುವಿಕೆಯಲ್ಲಿ ಪ್ರಮಾಣೀಕರಿಸಲ್ಪಟ್ಟ ಶೃಂಗಾರ ಈಗ ಬರುವ ಹಾಡಿನ ಮೂಲಕ ಹಳ್ಳಿಗರ ಶೃಂಗಾರದೆಡೆಗೆ ಸ್ಥಾನಾಂತರಿಸಲ್ಪಡುತ್ತದೆ. ಪಟ್ಟಣದಲ್ಲಿ ಒಮ್ಮೆಗೆ ಅವರಲ್ಲಿನ ಭಿನ್ನಾಭಿಪ್ರಾಯಗಳು ದೂರಗೊಳ್ಳುತ್ತವೆ ; ಆದರೆ ಆಗಲೇ ಕರ್ತವ್ಯ ಕೈಬೀಸಿ ಕರೆದು ಅವರು ಕಾಶ್ಮೀರಕ್ಕೆ ತೆರಳುತ್ತಾರೆ. ಈಗ ಪರಸ್ಪರ ಬೇರ್ಪಡುವ ಅವರು ಕೊನೆಯವರೆಗೂ ಒಬ್ಬರನ್ನೊಬ್ಬರು ಕಲ್ಪನಾಲೋಕದಲ್ಲಷ್ಟೇ ಸೇರುತ್ತಾರೆ.

ಈ ಮುಕ್ತಾಯವನ್ನು ಚರ್ಚಿಸುವ ಮುನ್ನ, ಪ್ರಭುತ್ವ ಮತ್ತು ರಿಷಿಕುಮಾರರ ಪರವಾಗಿ ಸ್ಪಷ್ಟ ತೀರ್ಮಾನ

ಕೈಗೊಳ್ಳುವಲ್ಲಿನ ಸ್ಥಾನಾಂತರಗಳನ್ನು ನಾವು ಗಮನಿಸಬೇಕಾಗುತ್ತದೆ. ಮದುವೆಯ ಸಂಸ್ಥೆಯನ್ನು ಪ್ರವೇಶಿಸಿರುವ ರೋಜಾಳಿಗೆ ರಿಷಿಕುಮಾರನ ಗೈರು ಹಾಜರಿಯಿಂದಲೇ ಎಲ್ಲ ಶಕ್ತಿ ಸಾಮರ್ಥ್ಯಗಳು ಹಿಂದಿರುಗಿ ಬರುತ್ತವೆ. ಅಂತಿಮವಾಗಿ ವಾಸಿಂಖಾನನನ್ನು ರಿಷಿ ಕುಮಾರನೊಂದಿಗೆ ವಿನಿಮಯಿಸಿ ಕೊಳ್ಳುವ ತೀರ್ಮಾನಕ್ಕೆ ಬರುವಂತೆ ಪ್ರಭುತ್ವದ ಮೇಲೆ ಒತ್ತಡ ತರುವಲ್ಲಿ ಆಕೆ ಸಫಲಳಾಗುತ್ತಾಳೆ. ಇದೇ ಉದ್ದೇಶಕಾಗಿಯೇ ರಿಷಿಕುಮಾರನನ್ನು ಕದ್ದೊಯ್ದಿರುವ ಲಿಯಾಖತ್ ಮತ್ತವನ ಸಹಚರರ ಬಯಕೆಯೊಂದಿಗೆ ಈಕೆಯ ಬಯಕೆ ಇಲ್ಲಿ ಹೊಂದಿಕೊಳ್ಳುತ್ತದೆ. ಆದೇನೇಯಾದರೂ, ವಿನಿಮಯಕ್ಕಾಗಿ ಗೊತ್ತುಪಡಿಸಿದ ಸೇತುವೆಯನ್ನು ರೋಜ, ರೋಯಪ್ಪ ಮತ್ತು ವಾಸಿಂಖಾನರು ತಲಪುತ್ತಿದ್ದಂತೆಯೇ ಸೇತುವೆಯ ಇನ್ನೊಂದು ಕಡೆಯಲ್ಲಿ ಲಿಖಯಾತ್ ರೋಷಾವೇಷದಿಂದ ವ್ಯಾನನ್ನು ಬಿಟ್ಟುಕೊಂಡು ಬರುತ್ತಾನೆ. ಅದು ತಿರುವು ಪಡೆಯುತ್ತಿದ್ದಂತೆ ಅನಿರೀಕ್ಷಿತವಾದದ್ದು ಆಗುತ್ತವೆ. ಒಬ್ಬ ವ್ಯಕ್ತಿ ಸೇತುವೆಯ ಮಧ್ಯಕ್ಕೆ ಓಡಿ ರಿಷಿಕುಮಾರನ ಬಟ್ಟೆಗಳನ್ನು ಎಸೆದು ಹಾಗೆಯೇ ಹೋಗಿಬಿಡುತ್ತಾನೆ. ಆತ ಬಿಸಾಡಿ ಹೋದದ್ದು ಏನೆಂದು ನೋಡಲು ರೋಜ ಮತ್ತು ರೋಯಪ್ಪ ದಿಕ್ಕೆಟ್ಟವರಂತೆ ಓಡುವಾಗ ಅದರಲ್ಲೇ ಮುಳುಗಿಬಿಟ್ಟ ನಮಗೆ ಉಗ್ರಗಾಮಿಗಳೇಕೆ ಹೀಗೆ ಸ್ವ-ಪರಾಜಿತ ರೀತಿಯಲ್ಲಿ ವರ್ತಿಸುತ್ತಿದ್ದಾರೆಂದು ಯೋಚಿಸುವ ಅವಕಾಶವೇ ಇಲ್ಲವಾಗುತ್ತದೆ. ಕಥಾನಕವು ಇದನ್ನು ಎಷ್ಟು ಹುಡುಗಾಟಿಕೆಯಿಂದ ನಿರ್ವಹಿಸುತ್ತದೆಯೋ ಅಷ್ಟೇ ಉಡಾಫೆ ನಮಗೂ ಇಲ್ಲಿ : ಎಷ್ಟೇ ಆದರೂ ಉಗ್ರಗಾಮಿಗಳು ತೀರಾ ಅನೂಹ್ಯರು, ಯಾವ ಸಮಯದಲ್ಲಿ ಏನು ಮಾಡುತ್ತಾರೆ ಎಂದು ಹೇಳಬರುವುದಿಲ್ಲ. ಅದಕ್ಕೆ ಪ್ರತಿಯಾಗಿ ಇಲ್ಲಿ ವಿನಿಮಯದೊಂದಿಗೆ ಸಿನೆಮಾ ಮುಗಿದಿದ್ದರೆ ಖಂಡಿತವಾಗಿಯೂ ಪ್ರಭುತ್ವಕ್ಕೆ ಸೋಲಾಗುತ್ತಿತ್ತು, ಲಿಯಾಖತನನ್ನು ಪರಿವರ್ತನೆ ಮಾಡುವ ರಿಷಿಕುಮಾರನ ಸಂದಿಗ್ಧ ಮೂಲೆ ಗುಂಪಾಗುವ ಮೂಲಕ ಅಂತ್ಯದೊಂದಿಗೆ ಆತನ ನಾಯಕತ್ವ ಮೆರೆಯದೆ ರೋಜ ಮತ್ತು ಉಗ್ರಗಾಮಿಗಳ ಯಶಸ್ಸು ಸಾಧಿಸುವ ಮೂಲಕ. ಆದರೆ ಇಲ್ಲಿ ಸೇತುವೆಯ ಮೇಲೆ ಬಟ್ಟೆ ಎಸೆಯಲ್ಪಟ್ಟದ್ದರಿಂದ ಬಹು ಮುಖ್ಯವಾದ ಸ್ಥಾನಾಂತರ ಉಂಟಾಗುತ್ತದೆ. ರೋಜ ಆದನ್ನು ಎತ್ತಿಕೊಂಡು ತನ್ನ ಎದೆಗವಚಿಕೊಳ್ಳುವಾಗ ಅವಳ ಜತೆಗೆಯೇ ನಮಗೂ ತೀವ್ರ ಭಯ ಆತಂಕಗಳಾಗುತ್ತವೆ. ರಿಷಿಕುಮಾರನ ಹತ್ಯೆಯಾಗಿರಬಹುದೇ ಎಂಬ ಅನುಮಾನ ನಮ್ಮಲ್ಲಿ ಪ್ರಾರಂಭವಾಗುವುದರ ಮೂಲಕ ನಿರೀಕ್ಷಿತ ಅಂತ್ಯ ಕೊಂಚ ನಿಗೂಢತೆಯೊಂದಿಗೆ ಮುಂದೂಡಲ್ಪಡುತ್ತದೆ. ಅದೇನೆಯಾದರೂ ಲಿಯಾಖತನ ತಂಗಿಯ ಸಹಾಯದಿಂದ ತಪ್ಪಿಸಿಕೊಂಡು ಗುಂಪಿನ ಎಲ್ಲರನ್ನೂ ಚಮತ್ಕಾರಕ ರೀತಿಯಲ್ಲಿ ಹೊಡೆದುರುಳಿಸಿ ಪೊದೆಗಳೆಡೆಯಲ್ಲಿ ಲಿಯಾಖತನನ್ನು ಮುಖಾಮುಖಿಯಾಗುವವರೆಗೂ ಓಡಿ ಬರುವ ರಿಷಿಕುಮಾರನನ್ನು ನೋಡುತ್ತಿದ್ದಂತೆಯೇ ನಮ್ಮ ಅನುಮಾನಗಳೆಲ್ಲ ಪರಿಹಾರವಾಗುತ್ತದೆ. ಆದರೆ ಲಿಯಾಖತನೂ ಈಗ ರಿಷಿಕುಮಾರನ ಹುರಿದುಂಬಿಸುವ ಮಾತುಗಳಿಂದ ಮಂತ್ರ ಮುಗ್ಧಗೊಂಡು ಪಳಗಿ ಬಿಟ್ಟಿದ್ದಾನೆ ; ಗೌರವಸೂಚಕವೆಂಬಂತೆ ಯಾಂತ್ರಿಕವಾಗಿ ತನ್ನ ಕೋವಿಯನ್ನು ಕೆಳಗಿಳಿಸಿ ರಿಷಿಕುಮಾರನನ್ನು ಹೋಗಗೊಡುತ್ತಾನೆ. ರಿಷಿಕುಮಾರನನು ರೋಜಾಳೆಡೆಗೆ ನಡೆಯುತ್ತಿದ್ದಂತೆ ಸೈನ್ಯವು ಲಿಯಾಖತನು ಹೋದ ದಿಕ್ಕಿನಲ್ಲಿ ತೆರಳುತ್ತದೆ. ಈಗ ಮತ್ತೆ ಏನೇನೂ ಕಾರಣವಿಲ್ಲದೆಯೇ ರೋಜಾ ರಿಷಿಕುಮಾರನ ಕಾಲಿಗೆರಗಿ ಪರಿಪೂರ್ಣ ಮಧ್ಯಮವರ್ಗದ ಹೆಂಡತಿಯ ಸ್ಥಿತಿ ಸಾಧಿಸುವ ದೃಶ್ಯಕ್ಕೆ ಸ್ಥಾನಾಂತರ ನಡೆಯುತ್ತದೆ. ತನ್ನ ಸೈನ್ಯ ಈಗ ಲಿಯಾಖತನನ್ನು ಖಂಡಿತವಾಗಿಯೂ ಹಿಡಿಯುತ್ತದೆಯಾಗಿ ವಾಸಿಂಖಾನನನ್ನು ಬಂಧನದಲ್ಲೇ ಉಳಿಸಿಕೊಳ್ಳಬಹುದೆಂದು ರೋಯಪ್ಪ ಈಗ ನಿರಾಳಗೊಂಡಿದ್ದಾನೆ. ಹೀಗಾಗಿ ನೆಟ್ಟಗೆ ಗೋಡೆಗೊರಗಿ ಕೂತು ಒಂದಾದ ದಂಪತಿಗಳೆಡೆಗೆ ರಕ್ಷಣಾತ್ಮಕವಾದ ನಸುನಗೆ ಬೀರುತ್ತಾನೆ. ರಿಷಿ ರೋಜಾಳನ್ನು ಗಾಳಿಯಲ್ಲಿ ಎತ್ತಿ ಹಿಡಿದು ತನ್ನ ದೇಹಕ್ಕೆ ಒತ್ತಿಕೊಳ್ಳುತ್ತಾನೆ. ಇದರೊಟ್ಟಿಗೆ ಸಿನೆಮಾ ತನ್ನ ಸ್ಖಲನಾತ್ಮಕ ಅಂತ್ಯ ತಲುಪುತ್ತದೆ.

## ಪ್ರಭುತ್ವ ಮತ್ತು ಪಿತೃಪ್ರಧಾನತೆ

ಸಣ್ಣದಾಗಿ ಹೇಳಬೇಕೆಂದರೆ ದುಸ್ವಪ್ನದಂತೆ ಪ್ರಾರಂಭವಾದ ಸಿನೆಮಾ ಹಸಿ ಸ್ವಪ್ನದಂತೆ ಕೊನೆಗೊಳ್ಳುತ್ತದೆ. ಆದರೆ ಇದು ಯಾರ ದುಸ್ವಪ್ನ ? ಯಾರ ಹಸಿ ಸ್ವಪ್ನ ? ನಾವಿಲ್ಲಿ ಒತ್ತು ಕೊಡಬೇಕಾಗಿರುವ ಅಂಶವೆಂದರೆ, ರೋಜಾಳ ಅಸಾಧಾರಣ ಪ್ರಯತ್ನ (ರಿಷಿಕುಮಾರ

ನಂತಲ್ಲದ) ಅಂತಿಮವಾಗಿ ಫಲಕಾಣದೇ ಹೋಗುತ್ತದೆ; ಏಕೆಂದರೆ ಆಶ್ಚರ್ಯ ಹುಟ್ಟಿಸುವ ರೀತಿಯಲ್ಲಿ ಯಾವುದೇ ಸ್ಪಷ್ಟ ಕಾರಣಗಳಿಲ್ಲದೆ ಲಿಯಾಖತನು ರಿಷಿಕುಮಾರನಿಗೆ ವಾಸಿಂಖಾನನನ್ನು ವಿನಿಮಯಿಸಿಕೊಳ್ಳುವಲ್ಲಿ ಸೋಲುತ್ತಾನೆ. ಇಲ್ಲಿ ರಿಷಿಕುಮಾರನ ಧೀರತೆಯ ಜತೆಜತೆಗೇ ಅವನಿಗೆ ತಪ್ಪಿಸಿಕೊಳ್ಳಲು ಸಹಾಯ ಮಾಡುವುದು, ಲಿಯಾಖತನಲ್ಲಿ ಪ್ರತಿಭಟನಾಹೀನ ಪರಿವರ್ತನೆಯನ್ನು ತರುವುದು ಮುಂತಾದೆಡೆಯಲ್ಲೆಲ್ಲಾ ಕೆಲಸ ಮಾಡುವುದು ಆ ಇನ್ನೊಬ್ಬ ಹೆಂಗುಸಿನ ಬಯಕೆಯೇ. ಈ ಇನ್ನೊಬ್ಬ ಹೆಂಗಸಿನ ಬಯಕೆಯನ್ನು ಸಿನೆಮಾದಲ್ಲಿ ಕಾಶ್ಮೀರದ so called ಸೌಂದರ್ಯಕ್ಕೆ ಸಮನ್ವಯಿಸಲಾಗಿದೆ, ಮುಂದೆ ಪ್ರವಾಸಿಗರಿಗೆ ಆಶ್ವಾಸನೆ ಕೊಡುವ ರೀತಿಯಲ್ಲಿ. ಲಿಯಾಖತನ ಬಯಕೆಗೆ ಸಂಬಂಧಿಸಿದಂತೆ, ಅಲ್ಲಿ ಸಂಪೂರ್ಣ ವಿಷಣ್ಣತೆ ಆವರಿಸುತ್ತದೆ. ಅತ ಇಲ್ಲಿ ತನ್ನ ಗುರಿಯೊಂದನ್ನು ಮಾತ್ರವಲ್ಲ ತನ್ನ ಸಿದ್ಧಾಂತವನ್ನು ಕೂಡ ಕಳೆದುಕೊಂಡಿದ್ದಾನೆ. ಅದೇನೇಯಾದರೂ ಅವನ ಸಿದ್ಧಾಂತವನ್ನು ಕೌರ್ಯ ಎಂಬುದಕ್ಕಿಂತ ಹೆಚ್ಚಿನ ರೀತಿಯಲ್ಲಿ ಸಿನೆಮಾದಲ್ಲಿ ತೋರಗೊಡುವುದೇ ಇಲ್ಲ. ಲಿಯಾಖತ್ ಮತ್ತವನ ಜತೆಗಾರರು ಅಜಾಧೀ ಅಥವಾ ಸ್ವತಂತ್ರ ಏಕೆ ಕೇಳುತ್ತಿದ್ದಾರೆ ಎಂದು ಸಿನೆಮಾದಲ್ಲಿ ನಮಗೆ ಹೇಳುವುದೂ ಇಲ್ಲ, ಅವರಿಗೆ ಹೇಳಲು ಬಿಡುವುದೂ ಇಲ್ಲ. ಸಿನೆಮಾದಲ್ಲಿ ಮೌನ ಗೊಳಿಸಲಾಗಿರುವ ಅತಿ ಮುಖ್ಯವಾದ ಗೌಪ್ಯ ಇದ್ದುದು. ಹೀಗಾಗಿ ಯಾರ ಬಯಕೆಗಳು ಪೂರೈಸಲ್ಪಟ್ಟಿದ್ದರ ಪ್ರಭುತ್ವ (ಲಿಯಾಖತ್ ಮತ್ತು ವಾಸಿಂಖಾನರ ಸಂಬಂಧದಲ್ಲಿ) ಮತ್ತು ಪಿತೃಪ್ರಧಾನತೆ (ರೋಜಾಳ ಸಂಬಂಧದಲ್ಲಿ)ಗಳ ಸೋಲಾಗಬಹುದಾಗಿತ್ತೋ ಅಂತಹ ವಾಸಿಂಖಾನ್, ಲಿಯಾಖತ್ ಮತ್ತು ರೋಜಾ ಇಲ್ಲಿ ಒಟ್ಟು ಭೀಕರತೆಯ ಪರಿಣಾಮಗಳನ್ನು ಹಂಚಿಕೊಳ್ಳುತ್ತಾರೆ.

ಇಲ್ಲಿ ಪ್ರಭುತ್ವ ಮತ್ತು ಪಿತೃಪ್ರಧಾನಗಳ ಇನ್ನೊಂದು ಬಗೆಯ ಬೆಸುಗೆ ಇದೆ. ಅದನ್ನಿಲ್ಲಿ ಸಣ್ಣ ಕುಟುಂಬದ ಪುನಃಸ್ಥಾಪನೆಯೊಂದಿಗೆ ಮಧ್ಯಮ ವರ್ಗದ ಹಿಂದೂ ಪುರುಷನ ಆಶೋತ್ತರಗಳ ಪೂರೈಕೆಯ ರೂಪದಲ್ಲಿ ತೋರಿಸಲಾಗಿದೆ. ಇದೇ ಕಾರಣಕ್ಕಾಗಿಯೇ ಬೇರೆ ಯಾರದೇ ಮಾತುಗಳಿಗಿಂತ ರಿಷಿಕುಮಾರನ ದನಿಗೆ ಸಿನೆಮಾ ಒತ್ತು ಕೊಡುವುದು. ಸಣ್ಣದಾಗಿ ಹೇಳಬೇಕೆಂದರೆ, ಹಿಂದೂ ಅವಿಭಕ್ತ ಕುಟುಂಬಕ್ಕೆ ಉಂಟಾದ ಬೆದರಿಕೆಯನ್ನು ಪ್ರಭುತ್ವಕ್ಕೆ ಉಂಟಾದ ಬೆದರಿಕೆ ಎಂದೇ ಸಿನೆಮಾ ಗ್ರಹಿಸುತ್ತದೆ. ಅಂತ್ಯದಲ್ಲಿ ಹೀಗೆ ಕುಟುಂಬಗಳ ಉಂಟಾದ ಬೆದರಿಕೆಯೋ ನಿವಾರಣೆಯಾಗುವ ಮೂಲಕ ಪ್ರಭುತ್ವದೆಡೆಗಿನ ಬೆದರಿಕೆ ಮಾಯವಾಗುತ್ತದೆ. ಸೈನ್ಯ ಮತ್ತು ಪೋಲಿಸ್‌ನಂತಹ ಪ್ರಭುತ್ವದ ಅಂಗಗಳು ಅಧಿಕಾರದ ಅಂತಿಮ ಪ್ರಕಟಣೆಯಾದರೂ ಅದು ಸ್ಪಷ್ಟವಾಗಿ ಕ್ರಿಯಾಶೀಲಗೊಳ್ಳುವುದು ಕುಟುಂಬದಂತಹ ಸ್ಥಳೀಯ ಅಂಶಗಳಲ್ಲಿ ಎನ್ನುವ ಫ್ಯುಕೋನ ಮಾತನ್ನು ಇಲ್ಲಿ ಅಗತ್ಯವಾಗಿ ಮೆಲುಕು ಹಾಕಬೇಕೆನಿಸುತ್ತದೆ. ಆದ್ದರಿಂದ ಕುಟುಂಬಕ್ಕೆ ಅಧಿಕಾರ ಪುನಸ್ಥಾಪಿಸಲ್ಪಟ್ಟಾಗ ಅದು ಪ್ರಭುತ್ವಕ್ಕೆ ಮರಳಿದ ಅಧಿಕಾರ ಕೂಡ ಆಗಿರುತ್ತದೆ. ಹೀಗೆ ಪ್ರಭುತ್ವವನ್ನು ಕುಟುಂಬಕ್ಕೆ ಸ್ಥಾನೀಕರಿಸುವ ಮೂಲಕ ಅದರ ಕೌರ್ಯದ ಮುಖಕ್ಕೆ ಮುಸುಕೆಳೆದು ಅದನ್ನು ರಕ್ಷಿಸುವ ತಂದೆಯೋಪಾದಿಯಲ್ಲಿ ತೋರಿಸುವುದರೊಂದಿಗೆ ಸಿನೆಮಾ ಪ್ರಭುತ್ವದ ಪರಿಶುದ್ಧೀಕರಣ ಮಾಡುತ್ತದೆ.

●

[ಇದೇ ಸಿನೆಮಾ ಕುರಿತ ಮುಂದುವರೆದ ಚರ್ಚೆಗಾಗಿ **ರುಸ್ತುಂಭರೂಚ** ಅವರ ''On the Border of Fascism– Manufacture of consent in Roja'' (EPw-June 4, 94) ಕೂಡ್ಡ ನೋಡಿ.]

# ರಾಜ್ಯಮಟ್ಟದ ಸ್ವಾಯತ್ತ ಅಧಿವೇಶನ

### ಪ್ರಸ್ತಾವನಾ ಟಿಪ್ಪಣಿ

ಮಹಿಳಾ ಸಂಘಟನೆಯ ಗುರಿ ಮತ್ತು ಆದ್ಯತೆಗಳ ಬಗ್ಗೆ ಸ್ಪಷ್ಟ ತಿಳಿವಳಿಕೆಯಿಂದ ನಾವು ಮುಂದುವರಿಯ ಬೇಕಾಗಿದೆ. ಅವುಗಳ ಬಗ್ಗೆ ನಮ್ಮ ತಿಳಿವಳಿಕೆ ಮತ್ತು ನಿಲವು ಸ್ಪಷ್ಟವಾದರೆ ಮಹಿಳಾ ಸಂಘಟನೆಗಳು ಎದುರಿಸ ಬೇಕಾಗಿ ಬರುವ ಸಮಸ್ಯೆಗಳನ್ನು ಕಂಡುಹಿಡಿಯುವುದಕ್ಕೆ ಸುಲಭವಾಗುತ್ತದೆ. ಮೊದಲು ನಾವು ಏನು ಮಾಡ ಬೇಕಾಗಿದೆ, ಏನು ಮಾಡಲು ಹೊರಟಿದ್ದೇವೆ, ಎಂಬು ದನ್ನು ಗುರುತಿಸಿಕೊಳ್ಳೋಣ, ಅದನ್ನು ಕಾರ್ಯರೂಪಕ್ಕೆ ತರಲು ಅಗತ್ಯವಾದ ಸಂಘಟನೆಯ ರೂಪು - ರೇಷೆಗಳನ್ನು ಕುರಿತು ಆಮೇಲೆ ಚರ್ಚಿಸೋಣ.

### ಮಹಿಳಾ ಸಂಘಟನೆಯ ಗುರಿ

ಮಹಿಳಾ ಸಂಘಟನೆ ಅಗತ್ಯ ಎಂಬ ವಿಷಯದಲ್ಲಿ ಅಭಿಪ್ರಾಯ ಭೇದವಿಲ್ಲ. ಸಂಘಟನೆಯ ಗುರಿ ಯಾವುದಿರ ಬೇಕು ಎಂಬ ಬಗ್ಗೆ ಬೇರೆ ಬೇರೆ ವಿಚಾರಗಳು ನಮ್ಮಲ್ಲಿ ಇರಬಹುದು. ಯಾವ ಯಾವ ಸಮಸ್ಯೆಗಳನ್ನು ಕುರಿತು ಆದ್ಯತೆಯ ಮೇರೆಗೆ ಹೋರಾಡಬೇಕು ಎಂಬ ಬಗ್ಗೆ ನಮ್ಮಲ್ಲಿ ಬೇರೆ ಬೇರೆ ಅಭಿಪ್ರಾಯಗಳು ಮೂಡಬಹುದು. ಮಹಿಳಾ ಸಂಘಟನೆಯ ಸ್ವರೂಪ ಹೇಗಿರಬೇಕು ಎಂಬ ಬಗ್ಗೆ ಕೂಡ ಬೇರೆ ಬೇರೆ ಬಗೆಯ ಸಲಹೆ, ಸೂಚನೆಗಳು ಬರಬಹುದು, ಆದರೆ ಮಹಿಳಾ ಸಂಘಟನೆ ಬೇಕು, ಗುರಿ ಸ್ಪಷ್ಟಪಡಿಸಿಕೊಳ್ಳಬೇಕು, ಆದ್ಯತೆಗಳನ್ನು ಗುರುತಿಸಿ ಕೊಂಡು ಮುಂದುವರಿಯಬೇಕು ಎಂಬ ಬಗ್ಗೆ ನಮ್ಮಲ್ಲಿ ಏಕಾಭಿಪ್ರಾಯ ಇದೆ. ಆ ವಿಷಯದಲ್ಲಿ ಏಕಾಭಿಪ್ರಾಯ ಇಲ್ಲದಿದ್ದಲ್ಲಿ ನೀವು ನಾವು ಯಾರೂ ಇಲ್ಲಿ ಹೀಗೆ ಸೇರು ತ್ತಿರಲಿಲ್ಲ.

ಮೇಲೆ ಪ್ರಸ್ತಾಪಿಸಿದ ಗುರಿ, ಆದ್ಯತೆ, ಸ್ವರೂಪ ನಿರ್ಧರಿಸುವ ಮೊದಲು ಸ್ಥೂಲವಾದ ಒಂದು ಚೌಕಟ್ಟನ್ನು ಹಾಕಿಕೊಳ್ಳುವುದು ಸೂಕ್ತ ಎಂದು ತೋರುತ್ತದೆ.

ನಾವು ಪ್ರಜಾಪ್ರಭುತ್ವ ರಾಜ್ಯ ಪದ್ಧತಿಯನ್ನು ಒಪ್ಪಿ ಕೊಂಡಿರುವ ರಾಷ್ಟ್ರದವರಾಗಿದ್ದೇವೆ. ನಾವು ಸಂಘಟಿತ ರಾಗಿ ಮಾಡುವ ಯಾವ ಕಾರ್ಯವೂ, ಕಾರ್ಯಕ್ರಮವೂ ಪ್ರಜಾಸತ್ತಾತ್ಮಕವಾದ, ಸಮಾನತೆ ಪ್ರಧಾನವಾದ ಮೌಲ್ಯಗಳು. ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವ ರಾಜ್ಯ ಪದ್ಧತಿ ಒಪ್ಪಿಕೊಂಡು ಸುಮಾರು ಅರ್ಧ ಶತಮಾನದಷ್ಟು ಕಾಲ ಆದರೂ ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾನತೆ ಯನ್ನು ಪಡೆಯಲು ಸಾಧ್ಯವಾಗದ ಅಸಹಾಯಕ ವಾಗಿರುವ ಜನಸಮೂಹ ಹೆಚ್ಚಿನ ಸಂಖ್ಯೆಯಲ್ಲಿ ಉಳಿದು ಕೊಂಡಿದೆ. ಅಂಥ ಅಸಹಾಯಕ ಜನಸಮೂಹದಲ್ಲಿ ಮಹಿಳೆಯರೇ ಅತ್ಯಧಿಕ ಸಂಖ್ಯೆಯಲ್ಲಿದ್ದಾರೆ.

ದೇಶದ ಒಟ್ಟು ಜನಸಂಖ್ಯೆಯ ಅರ್ಧಭಾಗ ಮಹಿಳೆ ಯರು. ಶತಮಾನಗಳಿಂದ ಈ ದೇಶದಲ್ಲಿ ಪುರುಷ ಪ್ರಧಾನ ಸಂಸ್ಕೃತಿ ಬೆಳೆದು ಬಂದಿದೆ. ಮಹಿಳೆಯರಿಗೆ ವ್ಯಕ್ತಿ ಸ್ವಾತಂತ್ರ್ಯ ಇರಲಿಲ್ಲ; ಪುರುಷನಿಗೆ ಸ್ತ್ರೀಸಮಾನಳು ಎಂಬ ದೃಷ್ಟಿ ಇರಲಿಲ್ಲ. ಸ್ತ್ರೀಯು ಪುರುಷನ ಸುಖ ಸಂತೋಷಗಳಿಗೆ ಅಗತ್ಯವಾದ ಒಂದು ಭೋಗವಸ್ತು, ಸಂತಾನ ಬೆಳೆಯುವ ಕ್ಷೇತ್ರ, ಸೇವೆ ಮಾಡುವ ದಾಸಿ ಎಂಬ ಹಾಗೆಯೇ ಚರಿತ್ರೆ ಬೆಳೆದು ಬಂದಿದೆ. ಮಹಿಳೆಗೂ ಒಂದು ಸ್ವಂತ ಮನಸ್ಸಿದೆ, ಅವಳಿಗೂ ಸುಖ-ಸಂತೋಷ ವಿಶ್ರಾಂತಿ ಎಂಬುದು ಬೇಕು, ಸ್ವಾತಂತ್ರ್ಯ ಸಮಾನತೆ ಯನ್ನು ಪಡೆಯುವ ಆಸೆ ಅವಳಲ್ಲಿಯೂ ಇದ್ದೀತು ಎಂದು ಮುಂತಾಗಿ ಪುರುಷ ಪ್ರಧಾನ ಸಂಸ್ಕೃತಿ ಯೋಚಿಸುವ ಗೋಜಿಗೇ ಹೋಗಿಲ್ಲ; ದೇಶಕ್ಕೆ ಸ್ವಾತಂತ್ರ್ಯ ಬಂದು, ದೇಶ ಪ್ರಜಾಪ್ರಭುತ್ವ ರಾಜ್ಯಪದ್ಧತಿಯನ್ನು ಒಪ್ಪಿಕೊಂಡು ಸುಮಾರು ಅರ್ಧ ಶತಮಾನದಷ್ಟು ಕಾಲವಾದರೂ ಮಹಿಳೆಯ ಆ ಸ್ಥಿತಿಯಲ್ಲಿ ಹೆಚ್ಚಿನ ಬದಲಾವಣೆ ಆಗಿಲ್ಲ. ಸಂವಿಧಾನ, ಕಾನೂನು ಪುಸ್ತಕಗಳಲ್ಲಿ ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯ ಸಮಾನತೆಯನ್ನು ಮಹಿಳೆಯರಿಗೂ ಕೊಡ ಲಾಗಿದೆ ಎಂದು ಇರುವುದು ನಿಜ. ಆದರೆ ಇರುವುದಷ್ಟ ನ್ನಾದರೂ ಮಹಿಳೆ ಅನುಭವಿಸುವಂಥ ವಾತಾವರಣ ನಿರ್ಮಾಣವಾಗಿಲ್ಲ. ಸಂವಿಧಾನ, ಕಾನೂನು ಪುಸ್ತಕ ಗಳಲ್ಲಿಯೂ ಸ್ತ್ರೀ ಪುರುಷರ ನಡುವೆ ವ್ಯತ್ಯಾಸ ತಾರತಮ್ಯ ಮಾಡಿರುವ, ಮಹಿಳೆಯ ಸ್ಥಾನಮಾನವನ್ನು ಕಡಿಮೆ ಮಟ್ಟದಲ್ಲಿಯೇ ಇಟ್ಟಿರುವ ಅಂಶಗಳು ಬೇಕಾದಷ್ಟಿವೆ. ಈ ತಾರತಮ್ಯದ ನೆಲೆಗಳನ್ನು ನಾವು ಗುರುತಿಸಿಕೊಳ್ಳ ಬೇಕಾಗಿದೆ.

ಪ್ರಜಾಪ್ರಭುತ್ವ ರಾಜ್ಯ ಪದ್ಧತಿ ಇರುವ ದೇಶದಲ್ಲಿ ರೂಪಿತವಾಗುವ ಸಂಸ್ಕೃತಿ ಮತ ಧರ್ಮ ಪ್ರಧಾನವಾದ ರಾಜ್ಯಪದ್ಧತಿಯಲ್ಲಿಯೂ, ರಾಜಪ್ರಭುತ್ವ ಇರುವಲ್ಲಿಯೂ ಸರ್ವಾಧಿಕಾರ ಪದ್ಧತಿಯಲ್ಲಿಯೂ ಇರುವಂತೆ ಸ್ಥಿರವಾಗಿ, ಚಲನೆ ಇಲ್ಲದೇ ಇರುವುದು ಸಾಧ್ಯವಿಲ್ಲ ಎಂಬುದೇನೋ ಸರಿ. ಆದರೆ ಆ ಬದಲಾವಣೆಗಳ ವೇಗವನ್ನು ಹೆಚ್ಚಿಸವುದಕ್ಕೆ ಮಹಿಳೆಯರಾದ ನಾವೇ ಜಾಗೃತರಾಗಿ ಹಕ್ಕೊತ್ತಾಯ (Demand)ಗಳನ್ನು ಮಾಡದಿದ್ದಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಈ ದೇಶದಲ್ಲಿ ಆಗುತ್ತಿರುವ ಬದಲಾವಣೆಗಳ ಆಮೆ ನಡಿಗೆ ಮುಂದುವರಿಯುತ್ತದೆ. ಮಹಿಳೆಯ ಮಟ್ಟಿಗೆ ಸ್ವಾತಂತ್ರ್ಯ, ಸಮಾನತೆ ಎಂಬ ಮಾತುಗಳು ರಾಜಕಾರಣಿಗಳ, ಪುರುಷರ ವೇದಿಕೆಯ ಮೇಲಿನ ಘೋಷಣೆಗಳಾಗಿ ಉಳಿಯುತ್ತವೆ. ಸಂವಿಧಾನದಲ್ಲೋ, ಕಾನೂನು ಪುಸ್ತಕಗಳಲ್ಲಿಯೋ ಕೊಳೆಯುತ್ತಾ ಬಿದ್ದಿರುವ ಜೀವಂತಿಕೆ ಕಳೆದುಕೊಂಡ ಅಕ್ಷರಗಳಾಗಿ, ವಿಚಾರಗಳಾಗಿ ಅವು ಉಳಿಯುತ್ತವೆ. ಹಾಗಾಗದಂತೆ ನೋಡಿಕೊಳ್ಳಲು ನಾವು ಮಹಿಳೆಯರು ಹೋರಾಡಬೇಕಾಗಿದೆ. ನಮ್ಮ ಹೋರಾಟ ನಾವು ಪುರುಷರಿಗಿಂತ ಹೆಚ್ಚು ಎಂಬುದಕ್ಕಲ್ಲ; ಪುರುಷರಿಗಿಂತ ಕಡಿಮೆಯವರಲ್ಲ ಸಮಾನರು ಎಂಬುದನ್ನು ಸ್ಥಾಪಿಸುವುದಕ್ಕಾಗಿ ನಮ್ಮ ಸ್ವಾತಂತ್ರ್ಯದ ಅಪೇಕ್ಷೆ ಸ್ವೇಚ್ಛಾವೃತ್ತಿಗಲ್ಲ ಆತ್ಮಗೌರವ, ಮಾನವ ಘನತೆಯಿಂದ ಬಾಳುವುದಕ್ಕೆ.

ಎಷ್ಟೋ ಜನ ಮಹಿಳೆಯರು ದೇಶಾದ್ಯಂತ ಈ ಬಗ್ಗೆ ಜಾಗೃತರಾಗಿದ್ದಾರೆ. ಎಷ್ಟೋಜನ ತಮ್ಮ ವೈಯುಕ್ತಿಕ ಮಟ್ಟದಲ್ಲಿ ಜಾಗೃತರಾಗಿ ತಮ್ಮ ಕೈಲಾಗುವ ಹೋರಾಟ ಮಾಡುತ್ತಿದ್ದಾರೆ. ಚಿಕ್ಕಪುಟ್ಟ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡೂ ಕೆಲಸ ಮಾಡುತ್ತಿದ್ದಾರೆ. ಸರ್ಕಾರಗಳೂ ಅಂಥ ಸಂಘ, ಸಂಸ್ಥೆಗಳನ್ನು ಹುಟ್ಟುಹಾಕಿವೆ. ಅವೆಲ್ಲವೂ ಸ್ವಾಗತಾರ್ಹವೇ. ಆದರೂ ಅವೆಲ್ಲವುಗಳ ಗುರಿ, ಆದ್ಯತೆ, ಸ್ವರೂಪಗಳಲ್ಲಿ ಹೊಂದಾಣಿಕೆ ಇಲ್ಲದೇ ಇರುವುದರಿಂದ ಆಗಬೇಕಾದಷ್ಟು ಪ್ರಯೋಜನ ಆಗುತ್ತಿಲ್ಲ. ಇಂದು ಇಲ್ಲಿ ಸೇರಿರುವ ಮಹಿಳಾ ಅಧಿವೇಶನ ರಾಜ್ಯಮಟ್ಟದಲ್ಲಿಯಾದರೂ ಮಹಿಳಾ ಸಂಘಟನೆಗಳ ಗುರಿ, ಆದ್ಯತೆ ಮತ್ತು ಸ್ವರೂಪ ಕುರಿತಂತೆ ಸರಿಯಾದ ಮತ್ತು ಕ್ರಿಯಾ ಸಾಧ್ಯವಾದ (workable) ನಿಲುವನ್ನು ತಳೆಯಬೇಕಾಗಿದೆ. ಸಂಘಟನೆಗಳನ್ನು ರೂಪಿಸಬೇಕಾಗಿದೆ.

ಆದ್ಯತೆಯನ್ನು ಗುರುತಿಸುವುದಕ್ಕಿಂತ ಮೊದಲು ಸಮಸ್ಯೆಗಳನ್ನು ಗುರುತಿಸಿಕೊಳ್ಳೋಣ. ಹಾಗೆ ಸಮಸ್ಯೆಗಳನ್ನು ಗುರುತಿಸಿಕೊಂಡು ಒಂದೊಂದೇ ಸಮಸ್ಯೆಗೆ ಸಂಬಂಧಿಸಿದಂತೆ ಚರ್ಚಿಸಿ ಒಂದು ತೀರ್ಮಾನಕ್ಕೆ ಬಂದು ಮುಂದಿನ ಸಮಸ್ಯೆಗೆ ಹೋಗೋಣ. ಈ ಕ್ರಮದಲ್ಲಿ ಎಲ್ಲ ಸಮಸ್ಯೆಗಳೂ ಚರ್ಚಿತವಾದ ಮೇಲೆ ಮತ್ತೆ ಬೇರೆ ಗುರುತಿಸಬೇಕಾದ ಸಮಸ್ಯೆಗಳಿದ್ದಲ್ಲಿ, ಅಂಥ ಸೂಚನೆ ಬಂದಲ್ಲಿ ಅವುಗಳನ್ನು ಕುರಿತು ಚರ್ಚಿಸಿ ತೀರ್ಮಾನಕ್ಕೆ ಬರೋಣ. ಅನಂತರ ಅವರೆಗೆ ನಡೆದ ಚರ್ಚೆಯ ಹಿನ್ನೆಲೆಯಲ್ಲಿ ಆದ್ಯತೆಯ ಪಟ್ಟಿ ತಯಾರಿಸೋಣ.

**ಗುರುತಿಸಿದ ಸಮಸ್ಯೆಗಳು :**

1 ಭ್ರೂಣದ ಹಂತದಲ್ಲಿಯೇ ತಾರತಮ್ಯದಿಂದ ಆಗುತ್ತಿರುವ ಅನ್ಯಾಯ.

2 ಹುಡುಗ-ಹುಡುಗಿ ಕುರಿತ ನಡುವಳಿಕೆ ನಿಯಮಗಳ ತಾರತಮ್ಯದಿಂದ ಉಂಟಾಗಿರುವ ಸಮಸ್ಯೆಗಳು.

3 ವಿದ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ಹುಡುಗ-ಹುಡುಗಿ ಮಧ್ಯೆ ಮಾಡುತ್ತಿರುವ ತಾರತಮ್ಯ.

4 ಮದುವೆ ವಿಷಯದಲ್ಲಿ ಆಗುತ್ತಿರುವ ತಾರತಮ್ಯ (ವರದಕ್ಷಿಣೆ, ವರಪೂಜೆ, ತಲಾಖ್, ಬುರಖಾ ಇತ್ಯಾದಿ ರೂಢಿ ಸಂಪ್ರದಾಯಗಳು)

5 'ಪರಸನಲ್ ಲಾ'

6 ಆಸ್ತಿ ವಿಷಯದಲ್ಲಿ ಮಾಡುತ್ತಿರುವ ತಾರತಮ್ಯ.

7 ಮಾನ್ಯತೆ ಇಲ್ಲದ ಮನೆಗೆಲಸ – ಅಂಥ ಮಹಿಳೆಯರ ಬಗೆಗಿನ ತಾರತಮ್ಯ ಮನೋಭಾವ.

8 ಉದ್ಯೋಗಸ್ಥ ಮಹಿಳೆಯ ಸಮಸ್ಯೆ.

9 ದೇವದಾಸಿ, ವೇಶ್ಯಾವೃತ್ತಿ, ಕ್ಯಾಬರೆ, ಜಾಹಿರಾತು, ದೂರದರ್ಶನ ಇತ್ಯಾದಿಗಳಿಗೆ ಸಂಬಂಧಿಸಿದಂತಹ ಮಹಿಳೆಯರ ಸಮಸ್ಯೆ.

10 **ಬೈಗುಳ :** ಬಹುಪಾಲು ಬೈಗುಳಗಳೆಲ್ಲ ಮಹಿಳೆಯ ಮೂಲದಿಂದಲೇ ಹುಟ್ಟಿಕೊಂಡು ಬಳಕೆಯಾಗಿರುವುದು. ಅವಮಾನ ಮಾಡಲು ಮಹಿಳೆಯ ಉಡುಪು ಹೋಲಿಸುವುದು.

11 ಮಹಿಳೆ – ಮಹಿಳೆಯರ ನಡುವೆಯ ಅನೂಚಾನವಾಗಿ ನಡೆದು ಬಂದ ರೂಢಿ ಸಂಪ್ರದಾಯಗಳ

ಕಾರಣದಿಂದಾಗಿ ಇರುವ ಮನೋಧರ್ಮದಿಂದ ಉಂಟಾಗಿರುವ ಸಮಸ್ಯೆಗಳು.

[ಸೊಸೆ, ಅತ್ತೆ, ವಿಧವೆ, ಮುತ್ತೈದೆ (ಸಮಾರಂಭದಲ್ಲಿ ವಿಧವೆ ನಿಷೇಧ, ಪೂಜೆ, ಅರಿಶಿನ, ಕುಂಕುಮ ಮುತ್ತೈದೆ ಸ್ವತ್ತು ಇತ್ಯಾದಿ ಕಲ್ಪನೆ)]

12 **ಬಿಡುವಿನ ಸಮಸ್ಯೆ :** ಕಲೆ, ಸಂಶೋಧನೆ, ಕುಶಲ ಕಲೆ, ಸಾರ್ವಜನಿಕ ಸೇವಾ ಕಾರ್ಯ ಇತ್ಯಾದಿಗಳಲ್ಲಿ ತೊಡಗಿಸಿಕೊಳ್ಳುವುದಕ್ಕೆ ಇರುವ ತೊಂದರೆ.

13 **ಮಹಿಳೆ ಮೇಲಿನ ದೌರ್ಜನ್ಯ :** ಕುಡಿತ, ಅತ್ಯಾಚಾರ, ಯುವತಿಯರನ್ನು ಚುಡಾಯಿಸುವುದು.

14 **ಸಾಮಾಜಿಕ ಸ್ಥಾನಮಾನಕ್ಕೆ ಸಂಬಂಧಿಸಿದ್ದು :**

1 ಪುರುಷ ಪ್ರಧಾನ ಲಕ್ಷಣಗಳಿಂದ ಕೂಡಿದ ವ್ಯವಹಾರಗಳು.

ರಾಷ್ಟ್ರಪತಿ, ಕುಲಪತಿ, ಛೇರ್‌ಮ್ಯಾನ, ಯಜಮಾನ (ಗಂಡ)

2 ನರ್ತಕಿ ಒಬ್ಬಳನ್ನು ಬಿಟ್ಟರೆ ಇನ್ನೆಲ್ಲ ವೃತ್ತಿ, ಸ್ಥಾನಗಳ ನಿರ್ದೇಶನ ಮಾಡುವಾಗ ಪುಲ್ಲಿಂಗ ರೂಪಿಯೆಂದೇ ವ್ಯವಹರಿಸುವ ರೂಢಿ ಸಂಪ್ರದಾಯ.

3 ಮಕ್ಕಳು ಹೆಸರು ಬರೆಸುವಾಗ ತಂದೆ ಹೆಸರು, ಹೊರಗೆ ವ್ಯವಹರಿಸುವಾಗ ಗಂಡ : ತಂದೆ ಹೆಸರು.

●

**ಸಮತಾ ವೇದಿಕೆ**

ಮೈಸೂರು

---

# ಅಧಿವೇಶನದ ವರದಿ

ಡಿಸೆಂಬರ್ 1994ರ ಹತ್ತು ಮತ್ತು ಹನ್ನೊಂದನೆಯ ತಾರೀಖಿನಂದು ಮೈಸೂರಿನ ಸಮತಾ ವೇದಿಕೆಯ ಆಶ್ರಯದಲ್ಲಿ ಕರೆಯಲಾದ ರಾಜ್ಯಮಟ್ಟದ ಸ್ವಾಯತ್ತ ಮಹಿಳಾ ಸಂಸ್ಥೆಗಳ ಅಧಿವೇಶನ ಕರ್ನಾಟಕದ ಮಹಿಳಾ ಚಳುವಳಿಯ ಹಂತದಲ್ಲಿ ಒಂದು ಮಹತ್ವದ ಹೆಜ್ಜೆ ಆಗಿತ್ತು. ಕರ್ನಾಟಕದಲ್ಲಿ ಹೀಗೆ ಸ್ವಾಯತ್ತ ಮಹಿಳಾ ಸಂಘಟನೆಗಳನ್ನು ಒಟ್ಟಾಗಿ ಸೇರಿಸಿ ಒಂದು ವೇದಿಕೆಯ ಅಡಿಯಲ್ಲಿ ತರುವ ಪ್ರಯತ್ನ ಬೆಂಗಳೂರಿನ ಅನೇಕ ಮಹಿಳಾ ಗುಂಪುಗಳಿಂದ ನಡೆದಿದ್ದರೂ ಅದು ಅನೇಕಾನೇಕ ಕಾರಣಗಳಿಂದ ವಿಫಲ ಪ್ರಯತ್ನವಾಗಿತ್ತು. ಸಮತಾದ ಆಶ್ರಯದಲ್ಲಿ 'ಕರ್ನಾಟಕ ಸ್ವಾಯತ್ತ ಮಹಿಳಾ ಸಂಘಟನೆ', ರಾಜ್ಯಮಟ್ಟದ ವೇದಿಕೆ' ಅಸ್ತಿತ್ವಕ್ಕೆ ಬಂದುದು ಸ್ವಾಗತಾರ್ಹ' ಈ ವೇದಿಕೆ ನಿಧಾನವಾಗಿಯಾದರೂ ಹೇಗೆ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬಹುದು ಎಂಬುದು ಕಾಲಾನುಕ್ರಮದಲ್ಲಿ ಚರ್ಚಿತವಾಗಬೇಕಿದೆ. ಬೆಂಗಳೂರಿನಲ್ಲಿ ಕ್ರಿಯಾಶೀಲವಾಗಿ ಕೆಲಸ ಮಾಡುವ ಹಲವಾರು ಮಹಿಳಾ ಸಂಘಟನೆಗಳು ಈ ಚರ್ಚೆಯಲ್ಲಿ ಭಾಗವಹಿಸದೇ ಇರುವುದು ಒಂದು ಕೊರತೆಯಾಗಿ ಕಂಡು ಬಂತು. ಬೆಂಗಳೂರಿನ ಅನೇಕ ಸಂಘಟನೆಗಳು ಒಂದೂವರೆ ವರ್ಷದ ಹಿಂದೆ ಒಂದು ಸ್ಥಳೀಯ ಸಮಾವೇಶ ಮಾಡುವ ಹಂತದಲ್ಲಿ ಒಟ್ಟಾಗಿ ಬಂದದ್ದು ; ನಾಲ್ಕೈದು ಸಭೆಗಳು ನಡೆದುದು, ನಂತರ ಯಾವ ಕಾರ್ಯ ರೂಪಕ್ಕೂ ಬರದೇ ಪ್ರಯತ್ನಗಳೆಲ್ಲ ಹಂಚಿ ಹರಿದು ಹೋದದ್ದು ನಮ್ಮಲ್ಲಿ ಕೆಲವರಿಗಂತೂ ತಿಳಿದಿದೆ.

ಸಂಘಟನೆಗಳ ಗುರಿ, ಆದ್ಯತೆ ಇವುಗಳನ್ನು ತಿಳಿದುಕೊಳ್ಳುವ ಹಾಗೂ ಸಂಘಟನೆಗಳ ನಿಲುವುಗಳನ್ನು ಸ್ಪಷ್ಟಪಡಿಸಿಕೊಳ್ಳುವ ಆಶಯ ಈ ಅದಿವೇಶನದ ಗುರಿಯಾಗಿತ್ತು ಎಂಬುದನ್ನು ಸಮತಾ ವೇದಿಕೆಯು ಪ್ರಸ್ತಾವನೆ ಟಿಪ್ಪಣಿಯಲ್ಲಿ ಬರೆಯಲಾಗಿದೆ.

ಎರಡು ದಿನ ನಡೆದ ಘೋಷ್ಠಿಯಲ್ಲಿ ಗುಂಪು ಚರ್ಚೆಗಳು, ಹಾಡುಗಳು, ಬೀದಿ ನಾಟಕಗಳು, ವಿಷಯ ಮಂಡನೆ ಕಾರ್ಯಕ್ರಮಗಳಿಂದು ಕೂಡಿದ್ದು ಮಹಿಳಾ ಸಮಸ್ಯೆಯ ವಿವಿಧ ಮುಖಗಳನ್ನು, ಹಾಗೂ ಮಹಿಳಾ

ಸ್ವಾಯತ್ತತೆಯ ಕಲ್ಪನೆಗಳನ್ನೂ ಪ್ರತಿಬಿಂಬಿಸುತ್ತಿದ್ದುವು. ಸುಮಾರು 30 ಸಂಘಟನೆಗಳ ನೂರು ಜನ ಮಹಿಳೆಯರೇ ಈ ಅಧಿವೇಶನದಲ್ಲಿ ಭಾಗವಹಿಸಿದ್ದುದು ಒಂದು ಪ್ರೋತ್ಸಾಹಕರ ಅಂಶವಾಗಿತ್ತು.

ಸಮತಾ ಹಾಗೂ ಇತರ ಸಂಘಟನೆಗಳ ಹಾಡುಗಳ ಮೂಲಕ ಪ್ರಾರಂಭವಾದ ಈ ಅಧಿವೇಶನ ಮಹಿಳೆಯರ ಮೈ ಚಳಿಯನ್ನು ಈ ರೀತಿಯ ಕಾರ್ಯಕ್ರಮದಿಂದ ಹೋಗಿಸುವುದಾಗಿತ್ತು. ಚಿಕ್ಕ ಚಿಕ್ಕ ಗುಂಪುಗಳಲ್ಲಿ ನಂತರ ಶಿಕ್ಷಣ, ಉದ್ಯೋಗ, ವಿವಾಹ ಮತ್ತು ಕುಟುಂಬ, ಸಂಸ್ಕೃತಿ ಇತ್ಯಾದಿಗಳ ಬಗ್ಗೆ ಚರ್ಚೆ ನಡೆದು ಈ ಬಗ್ಗೆಗಿನ ವರದಿಯನ್ನು ಓದಲಾಯಿತು. ನಂತರದ ಘೋಷ್ಠಿಯಲ್ಲಿ ಮಹಿಳಾ ಚಳುವಳಿಯ ಗುರಿ ಮತ್ತು ಆದ್ಯತೆಗಳ ಬಗ್ಗೆ ಚರ್ಚಿಸಲಾಯಿತು. ಸಂಜೆಯ ಕಾರ್ಯಕ್ರಮ ಕೊರವಂಜಿ ನೃತ್ಯ, ಕೋಲಾಟ, ಬೀದಿ ನಾಟಕಗಳಿಂದ ಕೂಡಿತ್ತು.

ಎರಡನೆಯ ದಿನದ ಘೋಷ್ಠಿಯಲ್ಲಿ ಮಹಿಳಾ ಚಳುವಳಿಯ ಯೋಜನೆ ಮತ್ತು ವಿದ್ಯಾಭ್ಯಾಸದ ಬಗ್ಗೆ ಚರ್ಚಿಸಲಾಯಿತು. ಸ್ವಾಯತ್ತತೆಯ ಬಗ್ಗೆ ನಡೆದ ಚರ್ಚೆಯಲ್ಲಿ ಸ್ವಾಯತ್ತತೆ ಎಂದರೇನು ಎಂಬ ವಿಷಯವನ್ನು ಸ್ಪಷ್ಟಗೊಳಿಸಿಕೊಳ್ಳಲು ಪ್ರಯತ್ನಿಸಲಾಯಿತು. ಸ್ವಾಯತ್ತತೆ ಎಂಬುದನ್ನು ಯಾವುದೇ ರಾಜಕೀಯ ಪಕ್ಷಕ್ಕೆ ಸೇರಿರದ, ಸರ್ಕಾರಿ ಅಥವಾ ಇತರೇ ಯಾವುದೇ ವಿದೇಶೀ ಅನುದಾನ ಪಡೆಯದೇ ಇರುವ ಸ್ವತಂತ್ರ್ಯವಾಗಿರುವ, ಪ್ರತ್ಯೇಕವಾಗಿರುವ ಮಹಿಳಾ ಸಂಘಟನೆಗಳು ಎಂಬರ್ಥದಲ್ಲಿ ಅರ್ಥೈಸಲಾಯಿತು. ಹೀಗೆ ಮಹಿಳಾ ಸಂಘಟನೆಗಳು ಸ್ವಾಯತ್ತವಾಗಿರುವ ಅಗತ್ಯ ಇದೆ ಎಂಬುದನ್ನು ತೀರ್ಮಾನ ಮಾಡಿದ ಮೇಲೆ ಸ್ವಾಯತ್ತ ಸಂಸ್ಥೆಗಳ ಸಂಪರ್ಕ ಹಾಗೂ ರಾಜ್ಯ ಸಮಿತಿಯ ಅವಶ್ಯಕತೆ ಕುರಿತು ಚರ್ಚಿಸಲಾಯಿತು. ಸಂಘಟನೆಯ ಸ್ವರೂಪದ ಬಗ್ಗೆ ಕೂಡಾ ಚರ್ಚಿಸಲಾಯಿತು.

1 ರಾಜ್ಯ ಮಟ್ಟದ ಸ್ವಾಯತ್ತ ಮಹಿಳಾ ವೇದಿಕೆಗೆ 'ಕರ್ನಾಟಕ ಸ್ವಾಯತ್ತ ಮಹಿಳಾ ಸಂಘಟನೆ' (ರಾಜ್ಯ ಮಟ್ಟದ ಮಹಿಳಾ ವೇದಿಕೆ) ಎಂಬ ಹೆಸರಿನಡಿಯಲ್ಲಿ ಕಾರ್ಯಕ್ರಮ ರೂಪಿಸಬೇಕೆಂದು ನಿರ್ಧರಿಸಲಾಯಿತು.

2 ಸ್ವಾಯತ್ತ ಸಂಘಟನೆಯ ಮಹಿಳೆಯರು–ತಮ್ಮ ತಮ್ಮ ಸಂಘಟನೆಯಿಂದ ಒಬ್ಬೊಬ್ಬ ಪ್ರತಿನಿಧಿಯನ್ನು ಈ ವೇದಿಕೆಗೆ ಕಳಿಸಬೇಕು. ಈ ಪ್ರತಿನಿಧಿ ಪ್ರತಿ ವರ್ಷವೂ ಬದಲಾವಣೆಯಾಗಬೇಕು ಈ ಪ್ರತಿನಿಧಿಗಳಲ್ಲಿ ನಾಲ್ಕು ಜನ ಸಂಚಾಲಕರನ್ನು ಆರಿಸಿ ಕಾರ್ಯಕ್ರಮ ರೂಪಿಸುವುದಕ್ಕೆ ಸಹಕಾರಿಯಾಗುವಂತೆ ಮಾಡಬೇಕು. ಅಧಿಕಾರ ಯಾರಲ್ಲೂ ಕೇಂದ್ರೀಕೃತವಾಗದಿರುವಂತೆ ಜಿಲ್ಲಾ ಮಟ್ಟದ ಸಭೆಗಳು ರಾಜ್ಯ ಮಟ್ಟದ ಸಭೆಗಳು ಬೇರೆ ಬೇರೆ ಕಡೆ ನಡೆಯುವುದನ್ನು ಪ್ರೋತ್ಸಾಹಿಸಬೇಕು.

ಅಂತಿಮವಾಗಿ ಕುಡಿತದ ವಿರುದ್ಧದ ಚಳುವಳಿ ನಡೆಸಬೇಕೆಂಬ ಬಗ್ಗೆ ಅತ್ಯಂತ ಉತ್ಸಾಹಕರವಾದ ಪ್ರತಿಕ್ರಿಯೆ ಸಭೆಯಲ್ಲಿ ಕಂಡು ಬಂತು. ಕುಡಿತದ ವಿರುದ್ಧದ ಚಳುವಳಿಯನ್ನು ರೂಪಿಸುವಲ್ಲಿ ಹೆಚ್ಚು ಹೆಚ್ಚು ಚರ್ಚೆ ಮಾಡುವ ಅಗತ್ಯವಿರುವುದರಿಂದ ಈ ಸಮಸ್ಯೆಯನ್ನು ನಿಧಾನವಾಗಿ ಕೈಗೆತ್ತಿಕೊಳ್ಳಬೇಕೆಂಬ ಸಲಹೆ ಮೂಡಿ ಬಂತು. ಸದ್ಯದಲ್ಲಿ ಮಹಿಳೆಯರಿಗೆ ಉದ್ಯೋಗದಲ್ಲಿ 30% ಮೀಸಲಾತಿ, ಇತ್ಯಾದಿಗಳ ಬಗ್ಗೆ ಒಂದು ಕಾರ್ಯಕ್ರಮ ರೂಪಿಸಿಕೊಳ್ಳುವುದು ಒಳಿತು ಎಂಬ ಅಭಿಪ್ರಾಯ ಮೂಡಿ ಬಂತು.

ಸಮತಾ ಅಧ್ಯಯನ ಕೇಂದ್ರದವರು ಮಹಿಳೆಯರ ಬಗೆಗೆ ಒಂದು ಕ್ಯಾಸೆಟ್ ಬಿಡುಗಡೆ ಮಾಡಿದುದು ಒಂದು ವಿಶೇಷ ಕಾರ್ಯಕ್ರಮವಾಗಿತ್ತು. ●

**ಚಂಪಾವತಿ ಎಚ್. ಎಸ್.**

## ಮುಸುಕಿನೊಳಗಿನ ಅಳು

ಸ್ವತಂತ್ರ ವ್ಯಕ್ತಿಯಾಗಿ
ಬೇರೆಯವರಿಗೆ ಸಮಾನಳು ಎಂದು
ಭಾವಿಸುವ ಹಕ್ಕಿನೊಂದಿಗೆ
ಹುಟ್ಟಿದ ನಾನು.

ಗಂಡು ಹೆಣ್ಣಿನ ನಡುವಿನ
ಸಮಾನತೆ ಪಾಪ ಎಂಬ
ಭಾವನೆಯೊಂದಿಗೆ
ಹುಟ್ಟಿಲ್ಲ ನಾನು.

ನಾನು ಬೆಳೆವುದನ್ನು ನೋಡಲು
ಉರುಳಲು ವರುಷಗಳು
ಸಮಾಜದ ಗಡಿಯಾರದ ಟಿಕ್ ಟಿಕ್
ಸದ್ದು ಜೋರಾಗುತ್ತಾ ಬಂದಿತು
ಸಮಾಜದ ಆದೇಶವನ್ನು ಆಲಿಸಿದೆ
ಅದರ ವಿಜಯದ ಕೂಗು ಕಿವಿಯಲ್ಲಿ
ಗುಯ್‌ಗುಡುತ್ತಿದೆ

ಕೇಳು ಹೆಣ್ಣೆ, ನೀನು ಕೇಳು
ನೀನು ಶೋಷಣೆಯ ಒಂದು ಸಾಧನ
ಸಂತೋಷ ಪಡಿಸುವುದಕ್ಕೆ ಇರುವ ಒಂದು ಗೊಂಬೆ
ನೀನು ಮರ್ಯಾದೆಯೆಂಬ ಕಲ್ಪನೆಯ
ಸಂಕೋಲೆಯನ್ನು ತೊಟ್ಟಿರುವೆ
ಶತಮಾನಗಳಿಂದ ಬಂದ
ಸಮಾಜದ ಕಟ್ಟುಪಾಡುಗಳಿಂದ
ಆಳಲ್ಪಡುತ್ತಿರುವೆ

ದಂಡನೆಗೊಳಿಗಾಗಿರುವುದಕ್ಕೆ, ಹೆಣ್ಣಾಗಿ ಹುಟ್ಟಿರುವುದಕ್ಕೆ
ಕೇವಲ ಪೋಷಕಳಾಗಿರುವುದಕ್ಕೆ
ನನ್ನ ಹೃದಯ ಅತ್ತಿತು.
ಹಾಳಾದ ನನ್ನ ಆತ್ಮವನ್ನು ತಿದ್ದಿದೆ
ನನ್ನ ಸಮಾನ ಹಕ್ಕುಗಳಿಗಾಗಿ ಎದ್ದು ನಿಂತೆ
ಆದರ ಸಮಾಜ ನಿಷ್ಕರುಣೆಯಾಗಿ ನನ್ನ ಬಹಿಷ್ಕರಿಸಿತು
ಕಡೆಗೆ ಸ್ವಾರ್ಥಿಯಾಗಿ, ಗಟ್ಟಿ ಮನಸ್ಸಿನವಳಾಗಿ
ಯಾವುದಕ್ಕೂ ಲಕ್ಷ್ಯ ಕೊಡದೆ
ಚೂರಾಗಿ ಹೋಗಿದ್ದ ನನ್ನ ಧೈರ್ಯಕ್ಕೆ ತೇಪೆಹಾಕಿದೆ
ನನ್ನ ಆರ್ಥಿಕ ಸ್ವಾತಂತ್ರ್ಯ ಕೇಳಿದೆ
ಆದರೆ ಸಮಾಜ ಕೊಟ್ಟಿತು ನಿರ್ಣಯ
ಹೆಣ್ಣೇ ನೀನು ಕೇವಲ ಆಳಲ್ಪಡುವವಳು
ಮತ್ತು ದಯಾ ಪಾತ್ರಳು ಎಂದು
ಯಾರಾದರೂ ಇದ್ದೀರಾ ?
ಹೆಣ್ಣಾಗಿ ಹುಟ್ಟುವುದು ಪಾಪವಲ್ಲ
ಎಂದು ಹೇಳುವುದಕ್ಕೆ
ಯಾರಾದರು ಇದ್ದೀರಾ ?
ಹೆಣ್ಣೆ ತಲೆ ಎತ್ತಿ ನಿಲ್ಲು
ಹೆಣ್ಣೆ ಘನತೆಯಿಂದ ಬಾಳು
ಎಂದು ಹೇಳುವುದಕ್ಕೆ
ಯಾರಾದರು ಎಲ್ಲಿಯಾದರು
ಕೇಳುವವರು ಇದ್ದೀರಾ ?

ಅನುವಾದ
**ಹೇಮಲತ ಎಚ್. ಎಂ.**
ಮೈಸೂರು

ಮೂಲ : WCCI 5ನೇ ಪ್ರಾದೇಶಿಕ ಸಮಾವೇಶದ ಆಮಂತ್ರಣ ಪತ್ರ.

# ಹಳ್ಳಿಗರ ಜತೆ ಸಾಕ್ರೆಟೀಸ್ : ಸ್ತ್ರೀಯರ ಬಗ್ಗೆ ಮಾತುಕತೆ

[ಪಂಜಾಬದ ಗುರ್ಗಾನ ಜಿಲ್ಲೆಯ ಜಿಲ್ಲಾಧಿಕಾರಿಯಾಗಿದ್ದಂಥ ಎಫ್. ಎಲ್. ಬ್ರೈನೆ 1929ರಲ್ಲಿ ಬರೆದ "ಸಾಕ್ರೆಟೀಸ್ ಇನ್ ಆ್ಯನ್ ಇಂಡಿಯನ್ ವಿಲೇಜ್" ಎಂಬ ಪುಸ್ತಕದ 'ಆನರ್ ಯುವರ್ ವುಮೆನ್' ವಿಷಯದ ಅನುವಾದವಿದು: ಇಲ್ಲಿ ಲೇಖಕರು ಸಾಕ್ರೆಟೀಸ್ ಹೆಸರಿನಿಂದ ಎಂಬ ಹಳ್ಳಿಗರಿಗೆ ಪ್ರಶ್ನಿಸುತ್ತ ಮಾರ್ಗದರ್ಶನ ಮಾಡಿದ್ದಾರೆ.

(ಒಂದು ಮುಂಜಾನೆ ಚಾವಡಿ ಕಟ್ಟೆಯ ಮೇಲೆ ಹಳ್ಳಿಗರು ಅದು ಇದು ಮಾತನಾಡುತ್ತ ಕುಳಿತಿರುವ ಸಮಯದಲ್ಲಿ ಸಾಕ್ರೆಟೀಸ್ ಅಲ್ಲಿಗೆ ಹೋದ. ಹಳ್ಳಿಗರು ಅವನನ್ನು ಬರಮಾಡಿ ಕೊಂಡರು. ಭಾರತೀಯ ಸಂಸ್ಕೃತಿಯ ಹಿರಿಮೆಯ ಬಗ್ಗೆ ಹೇಳಿ, ಅದಕ್ಕೆ ವಿಶ್ವದಲ್ಲಿ ಸಿಗಬೇಕಾದ ಬೆಲೆ ಸಿಕ್ಕಿಲ್ಲವೆಂದು ಗೊಣಗಿದ ರಾಜಕಾರಣಿಯೊಬ್ಬನನ್ನು—ಭಾರತೀಯ ಸ್ತ್ರೀಯರ ಹೀನ ಬದುಕಿನ ಹಿನ್ನೆಲೆಯಲ್ಲಿ—ತರಾಟೆಗೆ ತೆಗೆದುಕೊಂಡು ಬಂದಂಥ ಸಾಕ್ರೆಟೀಸ್ ಅದೆ ವಿಷಯದ ಬಗ್ಗೆ ಹಳ್ಳಿಗರಿಗೆ ಪ್ರಶ್ನಿಸ ತೊಡಗಿದ.)

ಸಾಕ್ರೆಟೀಸ್ : ಯಾರಾದರೂ ಗೋಹತ್ಯೆ ಮಾಡಿದರೆ ದಂಗೆಯಾಗುವುದಲ್ಲವೆ ?

ಹಳ್ಳಿಗರು : ಹೌದು, ಸಹಜವಾಗಿ.

ಸಾಕ್ರೆಟೀಸ್ : ತನ್ನ ಹೆಂಡತಿ ಆತ್ಮಹತ್ಯೆ ಮಾಡಿಕೊಳ್ಳುವ ಹಾಗೆ, ಸಾಯುವ ಹಾಗೆ, ಅಥವಾ ಓಡಿ ಹೋಗುವ ಹಾಗೆ ಯಾವನಾದರೂ ಮಾಡಿದರೆ ದಂಗೆಯಾಗುವುದೆ ?

ಹಳ್ಳಿಗರು : ಸಾಧ್ಯವಿಲ್ಲ, ನಾವು ಅವನ ಬಗ್ಗೆ ಕರುಣೆ ತೋರುತ್ತೇವೆ. ಅಲ್ಲದೆ ಆತ ಇನ್ನೊಂದು ಲಗ್ನವಾಗುವ ಸಮಯದಲ್ಲಿ ಭಾಗವಹಿಸುತ್ತೇವೆ.

ಸಾ : ನಿಮ್ಮ ಹಸು ಕರು ಹಾಕುವಾಗ ನೀವು ಯಾರನ್ನು ಕರೆಯುವಿರಿ ?

ಹ : ಆ ವಿಷಯವಾಗಿ ಗೊತ್ತಿರುವ ರೈತನನ್ನು.

ಸಾ : ನಿಮ್ಮ ಹೆಂಡತಿಯ ಹೆರಿಗೆಯ ಸಮಯದಲ್ಲಿ ಯಾರನ್ನು ಕರೆಯುವಿರಿ ?

ಹ : ಕಸಗೂಡಿಸುವವನ ಇಲ್ಲವೆ ಮಾದಿಗನ ಹೆಂಡತಿಯನ್ನು.

ಸಾ : ಅವಳು ಹಳ್ಳಿಯ ತೀರ ಗಲೀಜು ಹಾಗೂ ಕೀಳು ಹೆಂಗಸು ಅಲ್ಲವೆ ?

ಹ : ಹೌದು.

ಸಾ : ಅಲ್ಲದೆ ನೀವು ಬಾಣಂತಿಯನ್ನು ಚಿಂದಿ ಬಟ್ಟೆ ಹೊದಿಸಿ ಕತ್ತಲೆ ಕೋಣೆಯಲ್ಲ ಇಡುವಿರಲ್ಲವೆ ?

ಹ : ನಿಜ.

ಸಾ : ಅಲ್ಲದೆ ಪರದಾ ಮುಂತಾದುವುಗಳ ಬಗ್ಗೆ ಜಂಬ ಕೊಚ್ಚಿಕೊಳ್ಳುವಿರಿ. ಆದರೆ ನಿಮ್ಮ ಹೆಂಗಸರಿಗೆ ಕಕ್ಕಸಿನ ವ್ಯವಸ್ಥೆ ಮಾಡದೆ ಅವರು ಅಸೌಖ್ಯದ ಪ್ರಾಣ ಸಂಕಟದಿಂದ ಬಳಲುವ ಸ್ಥಿತಿಯಲ್ಲಿಟ್ಟಿರುವಿರಿ. ಅವರು ಮಲವಿಸರ್ಜನೆಗಾಗಿ ಹಳ್ಳಿಯ ಹೊರಗಡೆ ಅಲೆದಾಡುತ್ತ ಹೋಗುವುದಕ್ಕಾಗಿ ರಾತ್ರಿಯವರೆಗೂ ಕಾಯಬೇಕಾಗುತ್ತದೆ. ಅಥವಾ ಹಗಲು ಹೊತ್ತಿನಲ್ಲಿ ನಾಚಿಕೆಯಿಂದ ಅಡಗಿ ಕೂಡುವ ಸ್ಥಳವನ್ನು ಹುಡುಕಬೇಕಾಗುತ್ತದೆ.

---

○ ಅನುವಾದ : **ದರ್ಗಾ**

---

ಹಗಲು ಮತ್ತು ರಾತ್ರಿ-ಹೀಗೆ ಎಲ್ಲ ಸಮಯದಲ್ಲೂ-ತೊಂದರೆಗೀಡಾಗುತ್ತಾರೆ. ಅಲ್ಲದೆ ಭಯೋತ್ಪಾದಕ ನಾಯಿಗಳಿಂದಾಗಿ ಅವರು ಸ್ಥಳವನ್ನು ಬದಲಾಯಿಸಬೇಕಾಗುತ್ತದೆ.

ಹ : ನೀವು ಹೇಳುವುದು ನಿಜ ಸಾಕ್ರೆಟೀಸ್. ನೀವು ನಮ್ಮ ಕೆಟ್ಟ ಪದ್ಧತಿಯನ್ನು ಬಯಲಿಗೆಳೆದು ತೋರಿಸಿ ಕೊಟ್ಟೀರಿ.

ಸಾ : ಅಲ್ಲದೆ ನೀವು ನಮ್ಮ ಹುಡುಗಿಯರನ್ನು ಸರಿಯಾಗಿ ಬೆಳೆಸುವ ಮತ್ತು ಶಿಕ್ಷಣ ಕೊಡುವ ಬಗ್ಗೆ ಯಾವುದೇ ಪ್ರಯತ್ನ ಮಾಡುವುದಿಲ್ಲ.

ಹ : ಆ ಕಡೆ ಗಮನ ಹರಿಸಿಲ್ಲ.

ಸಾ : ಹೆಣ್ಣು ಹುಟ್ಟಿದರೆ ಆ ಕೂಸಿನ ತಂದೆಯನ್ನು ಸಂತೈಸುವಿರಲ್ಲವೆ ?

ಹ : ಹೌದು.

ಸಾ : ವಾಸ್ತವವಾಗಿ ಶೈಶವ ಮತ್ತು ಬಾಲ್ಯಾವಸ್ಥೆಯಲ್ಲಿ ಹೆಣ್ಣು ಮಕ್ಕಳ ಜೀವನ ಕಷ್ಟಮಯವಾಗಿದ್ದರಿಂದ ಹುಡುಗರಿಗಿಂತ ಹುಡುಗಿಯರು ಹೆಚ್ಚಾಗಿ ಅಕಾಲಮರಣಕ್ಕೀಡಾಗುತ್ತಾರೆ. ಇಷ್ಟಾದರೂ ವೈದ್ಯರು 'ಹುಡುಗರಿಗಿಂತ ಹುಡುಗಿಯರನ್ನು ಬದುಕಿಸಿಕೊಳ್ಳುವುದು ಸರಳವೆಂದು ಹೇಳುತ್ತಾರೆ.

ಹ : ನಿಜ, ನಮ್ಮದು ತಪ್ಪು. ನಾವು ನಮ್ಮ ಹೆಣ್ಣು ಮಕ್ಕಳನ್ನು ಉಪೇಕ್ಷೆ ಮಾಡುತ್ತೇವೆ.

ಸಾ ; ಮತ್ತು ಅವರಿಗೆ ಮನೆಗೆಲಸದ, ಮಕ್ಕಳನ್ನು ಸಾಕುವ, ಮತ್ತು ಗಂಡಂದಿರನ್ನು ನೋಡಿಕೊಳ್ಳುವ ಜ್ಞಾನವಿಲ್ಲದಷ್ಟು ಚಿಕ್ಕ ವಯಸ್ಸಿನಲ್ಲೇ ನೀವು ಅವರನ್ನು ಮದುವೆ ಮಾಡಿಕೊಳ್ಳುವಿರಿ. ಅವರು ಶಾಲೆಯಲ್ಲಿ ಆಟ-ಪಾಠಗಳ ಮುಖಾಂತರ ಮನಸ್ಸು ಮತ್ತು ಶರೀರವನ್ನು ಬೆಳೆಸಿಕೊಳ್ಳುವ ಅವಧಿಯಲ್ಲೇ ತಾಯಂದಿರಾಗುತ್ತಾರೆ.

ಹ : ನಿಜ ಸಾಕ್ರೆಟೀಸ್. ನಮ್ಮಲ್ಲಿ ಬಹಳಷ್ಟು ಜನರಿಗೆ ಇದೆಲ್ಲ ಅನ್ವಯಿಸುತ್ತದೆ. ಮತ್ತು ಒಂದಿಲ್ಲೊಂದು ರೀತಿಯಲ್ಲಿ ಇದು ನಮ್ಮೆಲ್ಲರಿಗೂ ಅನ್ವಯಿಸುತ್ತದೆ.

ಸಾ : ಅಲ್ಲದೆ ನಿಮ್ಮಲ್ಲಿ ಅನೇಕರು ಸ್ತ್ರೀಯರನ್ನು ಜೀವನವಿಡೀ ಗೃಹಬಂಧನದಲ್ಲಡುವಿರಿ.

ಹ : ಹೌದು ಕೆಲವರಲ್ಲಿ ಪರದಾ ವ್ಯವಸ್ಥೆ ಇದೆ.

ಸಾ : ಪರದಾ ವ್ಯವಸ್ಥೆ ಇಟ್ಟುಕೊಳ್ಳದ ಅನೇಕರು ತಮ್ಮ ಹೆಂಗಸರು ಒಂದಿಷ್ಟು ಹಣ ಇಲ್ಲವೆ ಶಿಕ್ಷಣ ಪಡೆದ ಕೂಡಲೇ ಗೃಹಬಂಧನದಲ್ಲಿಡುವರು.

ಹ : ಹೌದು ಅದು ಪದ್ಧತಿ ಕೂಡ.

ಸಾ : ಮತ್ತು ಹೆಂಗಸರು ಎಲ್ಲ ಕೆಲಸ ಮಾಡುತ್ತ ಮಕ್ಕಳ ಪಾಲನೆ-ಪೋಷಣೆ ಮಾಡುವರು. ಆದರೆ ಗಂಡಸರು ಸುಮ್ಮನೆ ಸುತ್ತುಗಟ್ಟಿ ಕುಳಿತು ಧೂಮಪಾನ ಮಾಡುವರು.

ಹ : ಹೌದು, ಅದು ಕೂಡ ನಿಜ.

ಸಾ : ನಿಮ್ಮ ಹೆಂಡತಿ ಬರೀ ಹೆಣ್ಣು ಹಡೆದರೆ ನೀವು ಅವಳನ್ನು ದೂರುವಿರಿ. ಅವಳ ಬಗ್ಗೆ ನಿಷ್ಕರುಣೆಗಳಾಗುವಿರಿ, ಅಲ್ಲದೆ ಕೊನೆಗೆ ಇನ್ನೊಂದು ಮದುವೆ ಮಾಡಿಕೊಳ್ಳುವಿರಿ.

ಹ : ಅನೇಕ ಸಲ ಹೀಗೂ ಆಗುವುದು ನಿಜ.

ಸಾ : ಕಾಯಿಲೆ ಬಿದ್ದ ಮತ್ತು ನರಳುವ ಮಕ್ಕಳನ್ನು ಆರೈಕೆ ಮಾಡುವುದು ಮತ್ತು ಅವುಗಳ ಸಾವನ್ನು ನೋಡುವುದು ಹೆಂಗಸರ ಕೆಲಸವಾಗಿದೆ.

ಹ : ನಿಜ ಸಾಕ್ರೆಟೀಸ್ ನಾವು ತಪ್ಪು ಮಾಡುತ್ತಿದ್ದೇವೆ.

ಸಾ : ನೀವು ನಿಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸಿದರೆ ಮತ್ತು ಅವರು ಶಿಕ್ಷಣ ಪಡೆದು ಪೂರ್ಣ ಬೆಳೆಯುವವರೆಗೆ ಲಗ್ನ ಮಾಡದಿದ್ದರೆ ಅವರಿಗೆ ಮಕ್ಕಳನ್ನು ಬೆಳೆಸುವುದರ ಜ್ಞಾನ ಪಡೆಯಲು ಸಾಧ್ಯವಿದೆ. ಮತ್ತು ಜೀವ ತೆಗೆದುಕೊಳ್ಳುವಂಥ ಅನೇಕ ರೋಗ-ರುಜಿನುಗಳಿಂದ ಮಕ್ಕಳನ್ನು ರಕ್ಷಿಸುವ ಸಾಮರ್ಥ್ಯ ಪಡೆಯುವರು.

ಹ : ನೀವು ಹೇಳುವುದೆಲ್ಲ ಸರಿ.

ಸಾ : ಚುಚ್ಚುಮದ್ದಿನ ಬೆಲೆ ಗೊತ್ತಿರುವ ತಾಯಿ : ಚುಚ್ಚು ಮದ್ದು ಹಾಕುವವ ಬಂದಾಗ ಕೂಸನ್ನು ಬಚ್ಚಿಡುವಳೆ ?

ಹ : ಎಂದಿಗೂ ಇಲ್ಲ. ತಾಯಿ ತನ್ನ ಮಗುವನ್ನು ಅದರ ತಂದೆಗಿಂತ ಹೆಚ್ಚಿಗೆ ಪ್ರೀತಿಸುವಳು. ಚುಚ್ಚು ಮದ್ದಿನ ಬೆಲೆ ಗೊತ್ತಾದರೆ ಮೈಲಿಬೇನೆ ಬರದಂತೆ ಖಂಡಿತ ನೋವಿಕೊಳ್ಳುವಳು.

ಸಾ : ನೀವು ನಿಮ್ಮ ಹೆಂಗಸರನ್ನು ಗೌರವಿಸುವುದಿಲ್ಲ ಮತ್ತು ಅವರನ್ನು ನಿಮ್ಮ ದನಗಳಿಗಿಂತಲೂ ಕಡಿಮೆಯಾಗೆ ನೋಡಿಕೊಳ್ಳುವಿರಿ ಎಂದು ನಾನು ಹೇಳಿದರೆ ಸತ್ಯಕ್ಕೆ ದೂರವಾಗುವುದಿಲ್ಲವಲ್ಲವೆ ?

ಹ : ಸಾಕ್ರೆಟೀಸ್ ನಮಗೆ ದಿಗಿಲಾಗುತ್ತಿವೆ. ನೀವು ಹೇಳುವುದು ತುಂಬ ಸರಿಯಾಗಿದೆ.

ಸಾ : ನನ್ನ ಮಾತುಗಳನ್ನು ನೆನಪಿಟ್ಟುಕೊಳ್ಳಿ. ಹೊಡೆಯಲಿಕ್ಕೆ, ಪೀಡಿಸಲಿಕ್ಕೆ, ಗುಲಾಮರಂತೆ ನಡೆಸಿಕೊಳ್ಳಲಿಕ್ಕೆ ದೇವರು ಕೊಟ್ಟ ಶ್ರಮಜೀವಿಗಳೆಂದು ತಿಳಿದುಕೊಳ್ಳದೆ ನೀವು ನಿಮ್ಮ ಸ್ತ್ರೀಯಂದಿರನ್ನು ಪುರುಷರಿಗೆ ಸಮವಾಗಿ ಕಂಡಾಗ, ಗೌರವಪೂರ್ಣವಾಗಿ ಕಂಡಾಗ, ಸರಿಯಾಗಿ ಅವರ ಬೆಳವಣಿಗೆಯಾಗುವಂತೆ ನೋಡಿಕೊಂಡು ನಿಮ್ಮ ಬದುಕಿನ ಸಮಭಾಗವೆಂದು ತಿಳಿದುಕೊಂಡಾಗ ಉಜ್ವಲ ಮತ್ತು ಆರೋಗ್ಯಮಯವಾದ ಬದುಕನ್ನು ಹೊಂದುವಿರಿ ಮತ್ತು ಇಡೀ ಜಗತ್ತೇ ನಿಮ್ಮನ್ನು ಗೌರವಿಸುವುದು. ●

# 'ಸಾರಿ, ಮೊದಲೆ ಹೇಳಬಾರದೆ?'

ಒಂದು ದಿನ ಕಾಲೇಜು ಮುಗಿದ ನಂತರ ಮನೆಗೆ ಹೋಗಲು ನಾನು, ನನ್ನ ಗೆಳತಿ, ಕಾಲೇಜಿನ ಹತ್ತಿರ ವಿರುವ ಬಸ್ ಸ್ಟಾಪಿನ ಬಳಿ ಬಂದೆವು; ಬಸ್ಸು ಬರುವುದಕ್ಕೆ ಇನ್ನೂ ಸಮಯವಿದ್ದುದರಿಂದ ನಾವಿಬ್ಬರು ಒಂದು ಕಡೆ ಮಾತಾಡುತ್ತಾ ಕುಳಿತೆವು. ಅಷ್ಟರಲ್ಲಿ ಸುಮಾರು ನಮ್ಮ ವಯಸ್ಸಿನವಳೇ ಆದ ಒಬ್ಬಾಕೆ ನಮ್ಮ ಹತ್ತಿರ ಬಂದಳು. ಅವಳು ನನಗೆ ಸ್ವಲ್ಪ ಪರಿಚಯವಿತ್ತು. ಆದರೂ ಅವಳು ಯಾರು ? ಎಂಬುದು ನನ್ನ ಜ್ಞಾಪಕಕ್ಕೆ ಬರಲಿಲ್ಲ. ಅವಳೇ ನನ್ನನ್ನು ನೋಡಿ "ನೀವು ಉಮಾ ಅಲ್ವಾ ನಾನು ಗೊತ್ತಾಗಲಿಲ್ವಾ ನಿಮಗೆ ಎಂದಳು. ಆದರೂ ಜ್ಞಾಪಕಕ್ಕೆ ಬರದೆ "ಸಾರಿ ನನಗೆ ಮರೆತು ಹೋಗಿದೆ ನೀವು ಯಾರು" ಎಂದು ಪ್ರಶ್ನಿಸಿದೆ. ಎಲ್ಲೋ ಒಂದು ಸಾರಿ ನಮಗೆ ಪರಿಚಯವಾಗಿದ್ದುದನ್ನು ತಿಳಿಸಿದಳು. ಆಗ ನನ್ನ ಸ್ಮೃತಿ ಶಕ್ತಿ ಕೆಲಸ ಮಾಡಿ ಅವಳು ಯಾರೆಂಬುದನ್ನು ತಿಳಿಸಿತು. ಅವಳೂ ನನ್ನಂತೆಯೇ ಒಬ್ಬ ವಿದ್ಯಾರ್ಥಿನಿಯಾಗಿದ್ದಳು. ಮೂವರೂ ಮಾತನಾಡುತ್ತಾ ಕುಳಿತುಕೊಂಡಾಗ ಸ್ವಲ್ಪ ದೂರದಲ್ಲಿ ಒಂದು ಹುಡುಗಿ ಬರುತ್ತಿರುವುದು ಕಾಣಿಸಿತು. ಅವಳು ದೂರದಲ್ಲಿ ಬರುತ್ತಿರುವ ಹುಡುಗಿಯನ್ನು ತೋರಿಸಿ "ಉಮಾ ಅಲ್ಲಿ ಬರ್ತಾ ಇದ್ದಾಳಲ್ಲ ಹಳದಿ ಸೀರೆ, ಅವಳು ಯಾರು ಗೊತ್ತ, ಅವಳು ಎಸ್. ಸಿ. ಕಣೆ, ನನ್ನ ಕ್ಲಾಸ್ ಮೇಟ್. ಅವಳನ್ನು ನೋಡಿದರೆ ಒಂದು ಸ್ವಲ್ಪವೂ ಎಸ್ ಸಿ. ಅನ್ನೋದು ಗೊತ್ತಾಗೊಲ್ಲ ಅಲ್ವಾ ? ಈಗಂತೂ ಅವರೂ ನಮಗಿಂತ ಹೆಚ್ಚಾಗಿ ಇರುತ್ತಾರೆ. ಹಾಳಾದವರು ನಮ್ಮನ್ನು ಮುಟ್ಟಸಿ ಕೊಂಡರೂ ಗೊತ್ತೇ ಆಗೋಲ್ಲ" ಎಂದಳು, ಪುನಃ ಅವಳು ಮಾತನ್ನು ಮುಂದುವರಿಸಿ ಆ ಹುಡುಗಿಯನ್ನು ನೋಡುತ್ತಾ "ಇವಳು ಬೆಳಗ್ಗೆ ಬಸ್ಸಿನಲ್ಲಿ ನನ್ನ ಪಕ್ಕದಲ್ಲೇ ಕುಳಿತಿದ್ದಳು. ಇದು ತನ್ನ ಅಮ್ಮನ ಸೀರೆ ಕಣೆ (ರೇಷ್ಮೆ ಸೀರೆ ಉಟ್ಟಿದ್ದಳು) ಮೈಲಿಗೆಯಾಗೋಯ್ತು. ನಮ್ಮಮ್ಮ ಇವತ್ತು ಮಂಗಳಗೌರಿ ವ್ರತ ಎಂದು ಉಟ್ಕೊಂಡು ಹೋಗು ಅಂತ ಹೇಳಿದ್ರು. ನಾನು ಯಾಕಾದ್ರೂ ಉಟ್ಕೊಂಡು ಬಂದೆನೋ ಉಮಾ. ಈಗ ಇಂಥಾ ಒಳ್ಳೆಯ ಸೀರೆಯನ್ನು ಒಗೆಯಲು ಹಾಕಬೇಕೆಂದರೆ ಎಷ್ಟು ಹೊಟ್ಟೆ ಉರಿದು ಹೋಗುತ್ತದೆ." ಎಂದು ಇನ್ನೂ ಏನೇನೋ ಹೇಳುವುದರಲ್ಲಿದ್ದಳು. ಅಷ್ಟರಲ್ಲೇ ನಾನು "ಏನೇ ನೀನು ಇಷ್ಟು ಓದಿ ಏನು ಪ್ರಯೋಜನ ಸಿಟಿಯಲ್ಲಿದ್ದುಕೊಂಡು, ವಿದ್ಯಾವಂತೆಯಾಗಿದ್ದು ಜಾತಿ ಬಗ್ಗೆ ಮಾತನಾಡುತ್ತೀಯಲ್ಲ. ಅಕಸ್ಮಾತು ಅವಳು ಯಾರು ಎಂಬುದು ಗೊತ್ತಿಲ್ದೆ ಇದ್ರೆ ಏನು ಮಾಡ್ತಾ ಇದ್ದೆ. ಪ್ರತಿ ದಿನವೂ ಓಡಾಡುವಾಗ ಪಕ್ಕದಲ್ಲಿ ಕುಳಿತಿರುವವರನ್ನು, ನಿಂತಿರುವವರನ್ನು ನಿಮ್ಮ ಜಾತಿ ಯಾವುದು ಎಂದು ಕೇಳ್ತೀಯಾ ? ಯಾರು ಯಾವ ಜಾತಿಯಾದರೇನು ? ಕ್ಲೀನಾಗಿದ್ದರೆ ಸರಿ ಎಂದು ಹೇಳಿದಾಗ "ಹಾಗಾದರೆ ಅವರ ಜಾತಿಯವರ ಮನೆಯಲ್ಲಿ ತಿನ್ನಬೇಕು, ಕುಡಿಯ ಬೇಕು, ಅವರ ಮನೆಯಲ್ಲಿ ಓಡಾಡಬೇಕು ಅಂತಲೆ ನೀನು ಹೇಳುವುದು ? ನಿಮ್ಮಂತಹವರು ಸಪೋರ್ಟು ಮಾಡಿರೋದರಿಂದ್ಲೇ ಅವರು ಹೆಚ್ಚಿಕೊಂಡಿರುವುದು." ನನಗೆ ಆಗ ಒಂದು ಕ್ಷಣ ನಗು ಬಂದಿತು. "ನಾವು ಯಾವ ಜಾತಿ ಅಂತ ತಿಳಿದುಕೊಂಡಿದ್ದೀಯಾ ? ನಾವೂ ಎಸ್. ಸಿ.ಗಳೇ ಕಣೆ ಎಂದಾಗ ಬೆಚ್ಚಿ ಬಿದ್ದಂಥವಳಾಗಿ, ನಮ್ಮಿಂದ ಕೊಂಚ ದೂರ ಸರಿದು "ಹೋಗಲೇ ನೀನು ಬರೀ ಸುಳ್ಳು ಹೇಳ್ತಾ ಇದ್ದಿಯಾ ಖಂಡಿತಾ ನಿಜನೇನೇ ನೀ ಹೇಳ್ತಾ ಇರೋದು ?" ಎಂದು ಪದೇ ಪದೇ ಕೇಳತೊಡಗಿದಳು. ಅವಳ ಮುಖದಲ್ಲಾಗುವ ಬದಲಾವಣೆಯನ್ನೇ ಗಮನಿಸುತ್ತಾ ಇದ್ದೆವು. "ಸಾರಿ ಉಮಾ ನನಗೆ ನೀವು ಎಸ್.ಸಿ. ಅಂತ ಗೊತ್ತಿರಲಿಲ್ಲ ಏನೇನೋ ಮಾತಾಡಿದೆ, ಮೊದಲೇ ಹೇಳಬಾರದಿತ್ತೆ ಛೆ, ಸಾರಿ...." ಅಷ್ಟರಲ್ಲಿ ಬಸ್ಸು ಬಂದಿದ್ದರಿಂದ ಬಸ್ಸು ಹತ್ತಬೇಕಾಯಿತು ಬಸ್ಸು ಚಲಿಸುತ್ತಾ ಇದೆ. ಅನ್ನಿಸಲಿಲ್ಲ. ಮನಸ್ಸಿಗೆ ಆದ ಗಾಯದಿಂದಾಗಿ ಅಂದು ರಾತ್ರಿ ನಿದ್ರೆ ದೂರವಾಯಿತು. ●

○ ಬಿ. ಉಮಾರಾಣಿ
ಮೈಸೂರು

# ಸ್ತ್ರೀವಾದಿ ಸಾಹಿತ್ಯ ವಿಮರ್ಶಾ, ಗೋಷ್ಠಿ

**ದಿನಾಂಕ 4-11-94 ಹಾಗೂ 5-11-94ರಂದು ಮಡಿಕೇರಿಯಲ್ಲಿ ಸ್ತ್ರೀವಾದಿ ಸಾಹಿತ್ಯ ವಿಮರ್ಶಾ ಶಿಬಿರದ ವಿಚಾರ ಗೋಷ್ಠಿಯನ್ನುಕರ್ನಾಟಕ ಲೇಖಕಿಯರ ಸಂಘದ ಆಶ್ರಯದಲ್ಲಿ ನಡೆಸಲಾಯಿತು. ಲೇಖಕಿಯರ ಸಂಘದ ಅಧ್ಯಕ್ಷರಾದ ಶ್ರೀಮತಿ ಹೇಮಲತಾ ಮಹಿಷಿಯವರ ಪ್ರಸ್ತಾವನೆಯೊಂದಿಗೆ ಪ್ರಾರಂಭವಾದ ಈ ಗೋಷ್ಠಿ ಸ್ತ್ರೀವಾದಿ ಚರ್ಚೆಯ ಪ್ರಾರಂಭದ ಒಂದು ಮಹತ್ವದ ಹೆಜ್ಜೆಯಾಗಿತ್ತು.**

ಡಾ॥ ಬಿ.ಎನ್. ಸುಮಿತ್ರಾಬಾಯಿಯವರು ಮಹಿಳಾ ಆಂದೋಲನವು ಜಾಗತಿಕ ಮಟ್ಟದಲ್ಲಿ ತಾತ್ವಿಕವಾಗಿ ತುಳಿದುಬಂದ ಹಾದಿಯನ್ನು ಗುರುತಿಸಿದರು. ಸ್ತ್ರೀವಾದಿ ವಿಮರ್ಶಾಕೃತಿಗಳು ದಿಢೀರನೆ ಹುಟ್ಟಿಕೊಳ್ಳುತ್ತವೆ. ಆದರೆ ಆಂದೋಲನದ ಹಿನ್ನಲೆಯಿರುವವರಿಗೆ ಇದು ಹೊಸದಲ್ಲ. ಸ್ತ್ರೀವಾದಿ ಪರಿಕಲ್ಪನೆ ಹತ್ತು-ಹದಿನೈದು ವರ್ಷದ ಹೋರಾಟದ ಅಂಗವಾಗಿ ಕಂಡುಬರುತ್ತಿಲ್ಲ. ಅದೊಂದು ಹೊಸ ಕಲ್ಪನೆಯೆಂಬಂತೆ ಭಾವಿಸಲಾಗುತ್ತಿದೆ. ಮಹಿಳಾ ಹೋರಾಟ ಹಾಗೂ ಆಂದೋಲನ ಮತ್ತು ಸ್ತ್ರೀವಾದದ ನಡುವೆ ಇರುವ ಸಂಬಂಧ ನಿರ್ವಾತದಲ್ಲಿ ಹುಟ್ಟುವುದಿಲ್ಲ.

ಮಹಿಳೆಯರ ಮೇಲೆ ಶೋಷಣೆ ನಡೆಯುತ್ತದೆಯೆಂಬ ಅರಿವು, ಲಿಂಗಜಾತಿ ಪದ್ಧತಿಯನ್ನು ಪ್ರಶ್ನಿಸುವುದು, ಪ್ರಜ್ಞಾಪೂರ್ವಕವಾಗಿ ಲಿಂಗಾಧಾರಿತ ವ್ಯವಸ್ಥೆಯ ವಿರುದ್ಧ ಹೋರಾಡುವುದು ಸ್ತ್ರೀಪುರುಷರ-ಸಂಬಂಧಗಳ ಪುನರ್‌ರಚನೆ, ಪುರುಷನೇ ಸಂಸ್ಕೃತಿಯ ಪ್ರಧಾನ ಘಟಕ ಎಂಬುದನ್ನು ಪ್ರಶ್ನಿಸುವುದು, ಮುಂತಾದವೇ, ಸ್ತ್ರೀ ಪ್ರಜ್ಞೆಯ ಸಾಧನಗಳು. ಚರಿತ್ರೆ ಲಿಂಗಜಾತಿಯ ಪಕ್ಷಪಾತ ಧೋರಣೆಯಿಂದ ಕೂಡಿದೆಯೆಂದು ಗುರುತಿಸಿದ ಸುಮಿತ್ರಾಬಾಯಿಯವರು ಚರಿತ್ರೆಯುದ್ದಕ್ಕೂ ಪಿತೃಪ್ರಧಾನ ತೀರ್ಮಾನಗಳನ್ನು ಕಾಣಬಹುದೆಂದರು.

ಐತಿಹಾಸಿಕವಾಗಿ ಜಾಗತಿಕ ಹಂತದಲ್ಲಿ ನಡೆದ ಸ್ತ್ರೀ ಚಳುವಳಿ ಏಕಸೂತ್ರದಲ್ಲಿ ನಡೆದ ಸಿದ್ಧಾಂತವಲ್ಲವೆಂದು ಹೇಳುತ್ತಾ, 19ನೇ ಶತಮಾನದಲ್ಲಿ ಪ್ರಾರಂಭವಾದ ಸ್ತ್ರೀಪರ ಚಳುವಳಿಯ ವಿವಿಧ ನೆಲೆಗಳನ್ನು ಗುರುತಿಸಿದರು. ವಿವಿಧ ದೇಶಗಳಲ್ಲಿ ಸ್ತ್ರೀ ವಿಮೋಚನಾ ಚಳುವಳಿಯ ರಾಜಕೀಯ ಹಾಗೂ ಇತರ ಸಿದ್ಧಾಂತಗಳನ್ನು ಗುರುತಿಸುತ್ತಾ, ಸ್ತ್ರೀ ವಿಮೋಚನಾ ಚಳುವಳಿಯ ಬಹು ರೂಪತೆಯನ್ನು ಗುರುತಿಸಿದರು. ರ‍್ಯಾಡಿಕಲ್ ಫೆಮಿನಿಸ್ಟರು ಪ್ರತಿಪಾದಿಸಿದ ಸ್ತ್ರೀವಾದದ ನೆಲೆ, ಸಮಾಜವಾದಿ ಸ್ತ್ರೀವಾದಿಗಳು ಗುರುತಿಸಿದ ಸ್ತ್ರೀಯರ ಶೋಷಣೆಯ ಮೂಲ ಹಾಗೂ ಪರಿಹಾರದ ಸ್ವರೂಪ, ಸಲಿಂಗ ವಾದಿಗಳು ವಿವರಿಸುವ ಸ್ತ್ರೀಯರ ವೈಶಿಷ್ಟತೆ ಮುಂತಾದವುಗಳನ್ನು ಅವರು ವಿವರಿಸಿದರು.

ಯಾವುದೇ ಒಂದು ವಾದವು ಪ್ರತಿಪಾದಿಸುವುದೇ ಸ್ತ್ರೀವಾದವಲ್ಲ. ಚರಿತ್ರೆಯ ವಿವಿಧ ಸಂದರ್ಭದಲ್ಲಿ ನಡೆದ ಸ್ತ್ರೀಪರ ಚಳುವಳಿಯ ಹಿನ್ನಲೆಯಲ್ಲಿ ನಾವು ನಮ್ಮ ನೆಲೆಯ ಮೂಲಕ ಗುರುತಿಸಿಕೊಳ್ಳಬೇಕಾಗಿದೆ ಎಂದು ಅವರು ನುಡಿದರು.

ಮಹಿಳೆಯರು ತಮ್ಮದೇ ಆದ ಸರಳ ಭಾಷೆಯನ್ನು ಬಳಸುವುದರಿಂದ, ಅದು ಎಲ್ಲ ವರ್ಗದ ಜನರನ್ನು ತಲುಪುವುದು, ಸ್ತ್ರೀಯರು ಬಳಸುವ ಭಾಷೆಯಲ್ಲಿ ಸರಳತೆಯಿದೆ ಎಂದು ಹೇಳುತ್ತಾ, ಮೀರಾ ಚಕ್ರವರ್ತಿಯವರು, ಪುರುಷರು ಬಳಸುವ ಭಾಷೆಯಲ್ಲಿ ಕ್ಲಿಷ್ಟತೆ ಇದೆಯೆಂದರು. ನಾವು ಯಾಕೆ ವೈದಿಕ ಸಂಸ್ಕೃತಿಯಿಂದ ಪ್ರಾರಂಭಿಸಬೇಕು ? ಉಪ ಸಂಸ್ಕೃತಿಯನ್ನು ನಾವು ಯಾಕೆ 'ಉಪ'ಯೆಂದು ಕರೆಯಬೇಕು. ಅದೇ ಏಕೆ ಪ್ರಧಾನ ಸಂಸ್ಕೃತಿಯಾಗಬಾರದು. ಈ ರೀತಿ, ನಮ್ಮ ಶೋಷಿತ ಸಂಸ್ಕೃತಿಯನ್ನು ನಾನೇ 'ಉಪ' ಎಂದು ಕರೆಯುವುದು ದಾರಿತಪ್ಪಿಸುವುದಾಗಿರುತ್ತದೆಯೆಂದು ನುಡಿದರು.

ಸ್ತ್ರೀವಾದದ ವಿಶಿಷ್ಟತೆ ಇತರ ಸಾಹಿತ್ಯ ಪಂಥಕ್ಕಿಂತ ಭಿನ್ನವಾದದು, ಅದು ಮಹಿಳಾ ಹೋರಾಟದೊಂದಿಗೆ ನೇರವಾದ ಸಂಬಂಧವನ್ನು ಹೊಂದಿದೆಯೆಂದು ಎನ್. ಗಾಯತ್ರಿಯವರು ಹೇಳುತ್ತಾ, ಸ್ತ್ರೀ ಶೋಷಣೆಯ ವಿಷಯದ ವ್ಯಾಪ್ತಿ ಅಂತರ ರಾಷ್ಟ್ರೀಯವಾಗಿದೆಯೆಂದರು. ಅದು ಕುಟುಂಬದಲ್ಲಿ ಅಭಿವ್ಯಕ್ತಿಯನ್ನು ಕಂಡಿದ್ದರೂ, ಅಂತರ ರಾಷ್ಟ್ರೀಯ ಸ್ವರೂಪವನ್ನು

ಹೊಂದಿವೆ. ಜಾಗತಿಕ ಮಟ್ಟದಲ್ಲಿ ನಡೆದ ಚಳುವಳಿಗಳು, ಪ್ರಜ್ಞೆಯ ವಿಸ್ತರಣೆ, ಸೋದರತ್ವದ ಕಲ್ಪನೆ, ವಿಶಿಷ್ಟ ಸಮಸ್ಯೆಗೆ ಪರಿಹಾರ, ಸಂಘಟನೆಯ ಅಗತ್ಯವನ್ನು ಒತ್ತಿ ಹೇಳಿದವು ಎಂದರು. ಜಾಗತಿಕವಾಗಿ ನಡೆದ ಸ್ತ್ರೀಪರ ಚಳುವಳಿಗಳನ್ನು ಗುರುತಿಸುತ್ತಾ ಆ ಚಳುವಳಿಗೆ ಆಯಾ ಸಂದರ್ಭದಲ್ಲಿ ಎತ್ತಿದ ಪ್ರಶ್ನೆಗಳ ಮಹತ್ವವನ್ನು ವಿವರಿಸಿದರು.

ಭಾರತದಲ್ಲಿ ಸುಧಾರಣಾವಾದಿ ಚಳುವಳಿ, ಸ್ವಾತಂತ್ರ ಹೋರಾಟದಲ್ಲಿ ಮಹಿಳೆಯರ ಪಾತ್ರ, ಎಡಪಕ್ಷಗಳು ನಡೆಸಿದ ತೆಲಂಗಾಣ ಚಳುವಳಿಗಳು, ಗೋದಾವರಿ ಪುರಳೇಕರ್‌ರವರ ಆದಿವಾಸಿ ಹೋರಾಟ, ಕೇರಳದಲ್ಲಿ ರೈತ ಮಹಿಳೆಯರು ನಡೆಸಿದ ಹೋರಾಟ ಮುಂತಾದವುಗಳು ಭಾರತದ ಮಹಿಳಾ ಚಳುವಳಿಗಳಲ್ಲಿ ಪ್ರಮುಖವಾದವುಗಳು ಎಂದರು.

ಹೊರಗಿನ ಜ್ಞಾನವನ್ನು ಆಯಾ ಚಾರಿತ್ರಿಕ ಹಿನ್ನಲೆ ಆಯಾಮವನ್ನು ಗಮನಿಸದೇ ಸೂತ್ರಬದ್ಧವಾಗಿ ಸ್ವೀಕರಿಸಿದಾಗ ಕೆಲವು ಗೊಂದಲಗಳಿಗೆ ಕಾರಣವಾಗುತ್ತದೆ ಎನ್ನುತ್ತಾ, ಪ್ರೀತಿಯವರು ಸ್ತ್ರೀ ಇದುವರೆಗೂ ಸ್ತ್ರೀವಾದಿ ಪರಿಕಲ್ಪನೆ, ಒಂದು ಪರಂಪರೆಯಾಗಿ ಮೂಡಿ ಬಂದಿದೆಯೆ ಎಂಬ ಪ್ರಶ್ನೆ ಎದುರಿಗಿದೆ. ಭಾರತೀಯ ನೆಲೆಯ ಸ್ತ್ರೀವಾದ ಎಂಬುದರ ಬಗ್ಗೆ ನಮಗೆ ಅಪಾರ ಕಾಳಜಿ ಇದೆಯೆಂದರು. ಭಾರತೀಯ ಸ್ತ್ರೀವಾದ ಯಾವ ರೀತಿ ಇರಬೇಕು, ಅದರ ಸ್ವರೂಪ ಹೇಗಿರಬೇಕು, ಎಂಬುದಕ್ಕೆ ಸ್ಪಷ್ಟತೆ ಬೇಕು. ಕನ್ನಡ ಸಾಹಿತ್ಯ ಪರಂಪರೆಯುದ್ದಕ್ಕೂ ಸ್ತ್ರೀವಾದ ಗೈರುಹಾಜರಿಯಾಗಿದೆ. ಸಾಹಿತ್ಯ ವಿಮರ್ಶೆ ಕೃತಿ ನಿಷ್ಠೆ ವಿಮರ್ಶೆ ಮಾತ್ರವಾಗಿರದೆ, ಅದು ಸಾಂಸ್ಕೃತಿಕ ವಿಮರ್ಶೆಯಾಗಬೇಕಾಗಿದೆಯೆಂದರು.

ಚಾರಿತ್ರಿಕವಾಗಿ ವಿಜ್ಞಾನದ ಹಾದಿಯಲ್ಲಿ ಮಹಿಳೆಯರ ನಿರ್ಲಕ್ಷ್ಯೆಯನ್ನು ಗುರುತಿಸಿದ ನೇಮಿಚಂದ್ರ ಅವರು ಸ್ತ್ರೀಯರನ್ನೇ ಅವೈಜ್ಞಾನಿಕವೆಂದು ಕರೆದ ಸಮಾಜ, ಪುರುಷನನ್ನು ಜ್ಞಾನದ ಪ್ರತೀಕವೆಂದು ಕರೆಯಿತು ಎಂದರು. ರಾಯಲ್ ಸೊಸಾಯಿಟಿಯಲ್ಲಿ ಸ್ತ್ರೀಯರಿಗೆ ಪ್ರವೇಶವಿರಲಿಲ್ಲ. ಅರಿಸ್ಟಾಟಲ್‌ನಂತವರು, ಸ್ತ್ರೀಯರನ್ನು ಕೀಳು, ಅಸಮಾನಳು ಎಂದು ಕರೆದನು. ಜೀವವಿಕಾಸದ ಹಾದಿಯಲ್ಲಿ ಸ್ತ್ರೀಯರು ಹಿಂದೆ ಉಳಿದಿದ್ದಾರೆಂದು ವಾದಿಸಲಾಯಿತು. ಹೆಚ್ಚು ಓದಿದ ಹೆಣ್ಣು ಬಂಜೆಯಾಗುತ್ತಾಳೆ, ಸ್ತ್ರೀತನವೇ ಒಂದು ರೋಗ. ಹೆಣ್ಣಿನ ವ್ಯಕ್ತಿತ್ವವನ್ನು ನಿರ್ಧರಿಸುವುದು ಗರ್ಭಾಶಯ, ಮುಂತಾದ ಅವೈಜ್ಞಾನಿಕ ನಂಬಿಕೆಗಳನ್ನು ಜನರಲ್ಲಿ ಬಿತ್ತಲಾಗಿತ್ತು. ಸಾಮಾಜಿಕ, ಆರ್ಥಿಕ, ಅಸಮಾನತೆಗಳಿಗೆ ಅವೈಜ್ಞಾನಿಕ ನಂಬಿಕೆಗಳನ್ನು ಜನರಲ್ಲಿ ಬಿತ್ತಲಾಗಿತ್ತು. ಸಾಮಾಜಿಕ, ಆರ್ಥಿಕ ಅಸಮಾನತೆಗಳಿಗೆ ವೈಜ್ಞಾನಿಕ ರೂಪ ಕೊಡುವ ಪ್ರಯತ್ನವನ್ನು ನಾವು ಇತಿಹಾಸದುದ್ದಕ್ಕೂ ನೋಡಬಹುದೆಂದ ಅವರು, ವಿಜ್ಞಾನದಲ್ಲಿ ಸ್ತ್ರೀವಾದಿ ದೃಷ್ಟಿಕೋನವನ್ನು ಬೆಳೆಸುವ ಅಗತ್ಯವನ್ನು ಒತ್ತಿ ಹೇಳಿದರು.

ವಿಜಯ ದಬ್ಬೆಯವರು ಸ್ತ್ರೀವಾದವು ಹೇಗೆ ಅಂತರ ಶಾಸ್ತ್ರೀಯ ನೆಲೆಯಲ್ಲಿ ಹುಟ್ಟಿದೆ, ಅವುಗಳ ನಡುವೆ ಇರುವ ಪೂರಕ ಸಂಬಂಧಗಳನ್ನು ಗುರುತಿಸಿದರು. ಚರಿತ್ರೆಯಲ್ಲಾದ ತಪ್ಪನ್ನು ಹಾಗೂ ಪ್ರಸ್ತುತ ಸಮಾಜದಲ್ಲಿ ಕಂಡುಬರುವ ತಪ್ಪು ನೆಲೆಯನ್ನು ಪ್ರಶ್ನಿಸುವ, ಹಾಗೂ ಸರಿಪಡಿಸುವವರನ್ನೆಲ್ಲಾ ಸ್ತ್ರೀವಾದಿಗಳು ಎನ್ನಬಹುದು ಎಂದು ಹೇಳುತ್ತಾ ಇವರು ಲಿಂಗ ವ್ಯವಸ್ಥೆಯ ವಿರುದ್ಧ ನಡೆಸಿದ ಹೋರಾಟಕ್ಕೆ ಚಾರಿತ್ರಿಕ ಹಿನ್ನಲೆಯಿದೆಯೆಂದರು. ಸ್ತ್ರೀವಾದದ ಕೆಲವು ಪಾರಿಭಾಷಿಕ ಶಬ್ದಗಳನ್ನು ಕನ್ನಡ ಭಾಷೆಯಲ್ಲಿ ಹೇಗೆ ಬಳಸಬಹುದು ಎಂಬುದನ್ನು ಸಹ ಚರ್ಚಿಸಿದರು.

ಎರಡನೆಯ ದಿನದ ಕಾರ್ಯಕ್ರಮದಲ್ಲಿ ಸಾವಿತ್ರಮ್ಮನವರ 'ಸುಪ್ತಬಯಕೆ, ಮಾಸ್ತಿ ವೆಂಕಟೇಶ್‌ರವರ ಹೇಮಕೂಟ, ಇಂದಿರಾರವರ 'ಸದಾನಂದ' ಶಿವರಾಮ ಕಾರಂತರ 'ಮೈಮನಗಳ ಸುಳಿಯಲ್ಲಿ,' ಹಾಗೂ ಕೆಲವು ಲೇಖಕಿಯರ, ಹಾಗೂ ಲೇಖಕರ ಕೃತಿಯಲ್ಲಿ ಸ್ತ್ರೀವಾದ, ಸ್ತ್ರೀಸೂಕ್ಷ್ಮತೆಗಳನ್ನು ಹಾಗೂ ಸ್ತ್ರೀ ವಿರೋಧಿ ಧೋರಣೆಯನ್ನು ಕುರಿತು ವಿವರವಾಗಿ ಚರ್ಚಿಸಲಾಯಿತು.

●

○ **ರಾಜೇಶ್ವರಿ ಎಚ್.ಎನ್.**

## ಮಾನಿನಿ

ನೀವು ನನ್ನ ಕಂಡಿರುವಿರಿ
ಕೆಂಪು, ಹಸಿರು, ನೀಲಿ ಬಣ್ಣಗಳಲ್ಲಿ
ವರ್ಣಗಳು ಸ್ಫೋಟಿಸುವ ನನ್ನ ಚಿತ್ರಗಳಲ್ಲಿ
ಬಿರಿದ ಹಳದಿ ಸೂರ್ಯ ಕಾಂತಿಗಳಲ್ಲಿ
ಹೊಲ ಬಯಲುಗಳಲ್ಲಿ
ರಾತ್ರಿ ಆಗಸದ ಮಬ್ಬು ಚುಕ್ಕಿಗಳಲ್ಲಿ
ನೋವು ತಂಬಿದ ಹೆಣ್ಣ ಕಂಗಳಲ್ಲಿ

ಹತ್ತಾರು ವರ್ಷಗಳು ಓದಿ ಫಲಿತಾಂಶ ಪಡೆದು
ಮುಂಬರುವ ನಿನ್ನ ಓದಿನಾಸೆಯು ತಡೆದು
ನಿನಗೆ ತಕ್ಕ ವರ ಹುಡುಕುವ ಕಾರ್ಯದಲ್ಲಿ ತೊಡಗಿ
ಈ ವರುಷ ಮುಂದಿನೂರುಷವೆಂಬ ನೀತಿಯ ತಳೆದು
ಮನೆಯಲ್ಲೆ ಉಳಿಸಿ ನಿನಗೆ ಹದಿನೆಂಟು ತುಂಬಿಸಿದರಲ್ಲೆ.

ಆತುರದಿ ಹತ್ತಿಕ್ಕೆ ಬೇಟೆಯಾಡಿದ ವರಗಳು ನೂರಾರು
ಕಾತರದವರ ಬೇಡಿಕೆಗಳಿಂದಾಗಿ ನಿನಗಾಗಲಿಲ್ಲ
ಒಂದಾದರೂ
ಇವರುತ್ತರ ಒಂದೇ ಈಗ ಹಣವಿಲ್ಲ
ಇನ್ನೊಮ್ಮೆ ನೋಡೋಣ ಯಾವಾಗಲಾದರೂ
ಹೀಗೆಂದೆ ಹೇಳುತ್ತಾ ನಿನಗೆ ಮೂವತ್ತು ತುಂಬಿಸಿದರಲ್ಲೆ

ಅರಳುವ ಹೂವ ಮೋಡಿಗೆ, ಹಾಡಿಗೆ
ಕುಣಿದೇ ನೀ ನದಿ ಹರಿವ ನಾದಕೆ,
ನಿನ್ನ ಮೈ ಮನಸ್ಸೆಲ್ಲಾ ತೇಲಿ ಹಗುರಾಗಿ
ಕಲ್ಪನೆಯ ಕನಸನ್ನು ನೀನಂದು ಕಂಡೆ

ಹತ್ತೊಂಬತ್ತರ ಎಳೆಮೊಗದಲ್ಲಿ ಅರಳಿತು ನಿನ್ನ ಪ್ರೀತಿಯ
ಮೊಗ್ಗು

ನಿನ್ನಲ್ಲಿ ಕೊಡಲು ಪ್ರೀತಿ ಇತ್ತು
ಮಳೆಗಾಲದಲ್ಲಿ ಭೋರ್ಗರೆವ ತುಂಬಾ ತೊರೆಯಂಥಾ
ಪ್ರೀತಿ

ಕೊಟ್ಟಷ್ಟೂ ಕೊನರಿ ಅಕ್ಷಯವಾದ ಪ್ರೀತಿ
ನಿನ್ನ ಪ್ರೀತಿಯು ಕೊಡಗಳೆಲ್ಲಾ ನಿನ್ನಲ್ಲೇ ಉಳಿದವು....

ನಯವಾಗಿ, ನವಿರಾಗಿ, ಹಸನಾಗಿ, ಹಸಿರಾಗಿ
ಹೆಣೆದ ನಿನ್ನ ಕನಸಿನ ಬಳ್ಳಿ
ಆಯಿತೆ ಆಗಸಕ್ಕೆ ಬೆಂಕಿಯು ಕೆನ್ನಾಲಿಗೆ
ಭೋರ್ಗರೆದವು ಬಣ್ಣಗಳು ನಿನ್ನ ಕಂಗಳಲ್ಲಂದು
ಎದೆಕದಗಳ ತೆಗೆದೊಗೆವ ಭಾವದಂತೆ
ನೆಲ-ಮುಗಿಲ ತುಂಬಿ ಮಿಗಬಲ್ಲ ನಿನ್ನ ಪ್ರೀತಿಯಂತೆ

ನಿನ್ನ ಕಣ್ಣ ಬಿಸಿಬಿಸಿ ಬಣ್ಣಗಳಲ್ಲಿ ಬಿಗಿದು ನಿಂತಿತ್ತು
ನಿನ್ನ ಅಂತರಂಗದ ಪ್ರತಿಬಿಂಬ
ವಿಶ್ವವನೆ ನಿನ್ನ ಕಲ್ಪನೆಯ ಬಣ್ಣದಲ್ಲದ್ದಿ
ಸಿಂಗರಿಸಹೊರಟ ಹುಚ್ಚಿ ನೀನಾದೆ
ಯೋಜಿತ ಬದುಕಿನ ಹಳಿದಾರಿಯಲ್ಲಿ
ಪ್ರೀತಿಯಿಲ್ಲ, ಸ್ಥಳವಿಲ್ಲ, ಆದರವಿಲ್ಲ, ಆಪ್ತರಿಲ್ಲ

ನೋವುನಿಟ್ಟುಸಿರುಗಳಿಗೆ ಸಿಕ್ಕ ತರಗೆಲೆಯಾಗಬೇಡ
ಕನಸುಗಳ ಕಾಣಬೇಡ
ಸಂವೇದನೆಗೆ ಶೀತಲಳಾಗಿ
ಭಾವನೆಗಳಿಗೆ ಜಡವಾಗಬೇಡ

ಭವಿಷ್ಯ ನಿರೀಕ್ಷೆಯಲ್ಲಿ ವರ್ತಮಾನ ಕಳೆಯಬೇಡ
ನಿನ್ನ ಬದುಕಿಗಾಗಿ ಯೋಚಿಸು, ಎದ್ದೇಳು
ನಿರ್ಧರಿಸು....
ಜೀವವಿದ್ದು ಸತ್ತಂತೆ ಬದುಕಬೇಡ

●

○ ವಿ. ಪಿ. ಮಮತಾ

# ಗ್ರಾಮೀಣ ಪ್ರದೇಶದಲ್ಲಿ ಹೆಣ್ಣಿನ ಸ್ಥಿತಿ - ಗತಿ

ಹಳ್ಳಿಗಳಲ್ಲಿ ಸಾಮಾನ್ಯವಾಗಿ ಅಂದರೆ (ಕುಟುಂಬಗಳಲ್ಲಿ) ಎಲ್ಲಾ ವಿಷಯಗಳಲ್ಲಿ ತೀರ್ಮಾನ ತೆಗೆದುಕೊಳ್ಳುವುದು ತಂದೆ-ತಾಯಿಗಳದ್ದೆ. ಅವರ ಮಕ್ಕಳು ಕೇವಲ ಪ್ರೇಕ್ಷಕರಾಗಿರುತ್ತಾರೆ. ಮಕ್ಕಳನ್ನು ಕೇವಲ ದುಡಿಯುವ ಯಂತ್ರಗಳನ್ನಾಗಿ ಮಾಡಿದ್ದಾರೆಯೆ ವಿನಹಃ ಮಕ್ಕಳ ಮುಂದಿನ ಭವಿಷ್ಯದ ಬಗ್ಗೆ ಗಮನವಿಲ್ಲ. ಮಕ್ಕಳು ಕಲಿತು ವಿದ್ಯಾವಂತರಾಗಬೇಕು ಎಂಬ ಕನಸೇ ಇಲ್ಲ. ನಮ್ಮ ಮಕ್ಕಳು ಕಲಿತು ನಾಳೆ ಯಾರನ್ನು ಉದ್ಧಾರ ಮಾಡಬೇಕಾಗಿದೆ ಎಂಬ ತಪ್ಪು ಕಲ್ಪನೆ, ಶಾಲೆಗೆ ಹೋಗುತ್ತಿರುವ ವಯಸ್ಸಿನ ಮಕ್ಕಳನ್ನು ಶಾಲೆಗೆ ಕಳಿಸದೆ ಅವಳಿಗಿಂತ ಚಿಕ್ಕಮಕ್ಕಳನ್ನು ನೋಡಿಕೊಳ್ಳಲು ಮನೆಯಲ್ಲಿ ಬಿಟ್ಟುಹೋಗುತ್ತಾರೆ. ಮನೆಯ ಎಲ್ಲಾ ಜವಬ್ದಾರಿಯನ್ನು ಆ ಮಗುವೆ ಮಾಡಬೇಕು. ಆಟ - ಪಾಠಗಳನ್ನು ಅಡಿಕೊಳ್ಳುವ ವಯಸ್ಸಿನಲ್ಲಿ ವಂಚಿತಳಾಗಿರುತ್ತಾಳೆ. ತಮ್ಮ ಹಳ್ಳಿಗಳಲ್ಲಿ ಶಾಲೆಗಳು ಇದ್ದರೂ ತಂದೆ-ತಾಯಿಗಳು ಮಕ್ಕಳನ್ನು ಶಾಲೆಗೆ ಕಳಿಸುವುದಿಲ್ಲ. ಆಕಸ್ಮಿಕವಾಗಿ ಶಾಲೆಗೆ ಕಳಿಸಿದರೆ ತಮ್ಮ ಮಕ್ಕಳ ವಯಸ್ಸು ಹಾಗೂ ಎಷ್ಟನೆ ತರಗತಿಯಲ್ಲಿ ಓದುತ್ತಿದ್ದಾರೆ ಎಂದು ಕೇಳಿದರೆ ತಂದೆ - ತಾಯಿಯರಿಗೆ ಗೊತ್ತೆ ಇರುವುದಿಲ್ಲ. ನೋಡಿ ಎಂತಹ ವಿಪರ್ಯಾಸ. ಇನ್ನು ಊರಿನಲ್ಲಿ ಒಟ್ಟು 10 - 12 ಅನುಕೂಲಸ್ಥರ ಕುಟುಂಬಗಳು ಇರಬಹುದು. ಉಳಿದವರೆಲ್ಲಾ ಬಡವರು. ಹೆಚ್ಚು ಕಡಿಮೆ ಎಲ್ಲಾ ವಿದ್ಯಾರ್ಥಿಗಳಿಗೂ ಪಠ್ಯಪುಸ್ತಕವೊಂದೆ ಆಧಾರ. ಆ ಮುಗ್ದ ಮಕ್ಕಳು ಬೇರೆ ಪುಸ್ತಕಗಳನ್ನು ಕಂಡವರಲ್ಲ. ಶಾಲೆಯ ಲೈಬ್ರರಿಯಲ್ಲಿ ವಿದ್ಯಾರ್ಥಿಗಳ ಓದಿಗೆ ಪೂರಕವಾದಂತ ಮತ್ತು ಶೈಕ್ಷಣಿಕವಾಗಿ ಅವರನ್ನು ಆಕರ್ಷಿಸುವಂತ ಪುಸ್ತಕಗಳು ನಿಯತಕಾಲಿಕೆಗಳು ಇರುವುದಿಲ್ಲ. ತಮ್ಮ ಮಕ್ಕಳು ಏನು ಓದುತ್ತಿದ್ದಾರೆ. ಓದಿನಲ್ಲಿ ಎಷ್ಟು ಬುದ್ಧಿವಂತರಿದ್ದಾರೆ ಎಂದು ತಿಳಿಯಬಲ್ಲ ವಿದ್ಯಾವಂತರಾದ ತಾಯ್ತಂದೆಯರ ಸಂಖ್ಯೆ ಬೆರಳಣಿಕೆಯಷ್ಟು. ಇನ್ನು ಹೆಣ್ಣು ಮಗು ದೊಡ್ಡವಳಾದ ಮೇಲೆ ಅವಳನ್ನು ಶಾಲೆಗೆ ಕಳಿಸದೆ ಹಾಗು ಮನೆಯಿಂದ ಹೊರಗಡೆ ಕಳಿಸಲು ಹೆದರುತ್ತಾರೆ. ಒಟ್ಟಾರೆ ಅವರಿಗೆ ಮದುವೆ ಮಾಡುವ ಅತುರ. ಇದು ಸಹಜ, ಆದರೆ ಮದುವೆ ಮಾಡಿಕೊಳ್ಳುವ ಹೆಣ್ಣಿಗೆ ತಾನು ಇಷ್ಟಪಟ್ಟವರನ್ನು ಮದುವೆ ಆಗಬೇಕು ಎಂಬ ಕನಸನ್ನು ಕಾಣುತ್ತಾ ಇರುತ್ತಾಳೆ. ಆದರೆ ಇದನ್ನೆಲ್ಲಾ ಗಮನಿಸದೆ ತಾವು ಇಷ್ಟಪಟ್ಟವರೆ ತಮ್ಮ ಮಗಳು ಮದುವೆ ಆಗಬೇಕು. ಒಟ್ಟು ತಮ್ಮ ಜವಾಬ್ದಾರಿ ಕಳೆದುಕೊಳ್ಳುವುದನ್ನೆ ನೋಡುತ್ತಾರೆ. 14-15 ವರ್ಷ ತುಂಬುವುದರೊಳಗೆ ಮದುವೆ ಮಾಡುತ್ತಾರೆ. ಸಂಸಾರದ ತಿಳುವಳಿಕೆ ಇರಲ್ಲ. ತಿಳುವಳಿಕೆ ಬರುವಷ್ಟರಲ್ಲಿ ಅವಳ ಗಂಡ ಬಿಟ್ಟಿರುತ್ತಾನೆ. ಆಗ ಅವಳಿಗೆ ಬೇರೆ ದಾರಿ ಇಲ್ಲದೆ ಮತ್ತೆ ತವರು ಮನೆಗೆ ಬಂದು ಉಳಿಯುವಂತಾಗುತ್ತಾಳೆ. ಮದುವೆ ಎನ್ನುವ 3 ಅಕ್ಷರದ ಪದ (ಅರ್ಥ) ಯಾವಾಗ ಗೊತ್ತಿರುವುದಿಲ್ವೋ ಆಗ ಇಂತ ಪರಿಸ್ಥಿತಿಗಳು ಬರುತ್ತೆ. ಹಳ್ಳಿಗಳಲ್ಲಿ ಕೇವಲ ಅವಿದ್ಯಾವಂತರಿಗೆ ಮಾತ್ರ ಇಂತಹ ಸಮಸ್ಯೆಗಳು ಬರಲ್ಲ. ಬುದ್ಧಿವಂತರು ವಿದ್ಯಾವಂತರೂ ಇಂತಹ ಕೆಲಸ ಮಾಡುತ್ತಾರೆ.

ಉದಾ : ಮಾದೇವಿ ಎಂಬ ಹುಡುಗಿ ತುಂಬಾ ಬಡತನದಲ್ಲಿ ಹುಟ್ಟಿ ಬೆಳೆದವಳು. ಬೇರೆಯವರ ಸಹಕಾರದೊಂದಿಗೆ ಕಾಲೇಜಿಗೆ ಹೋಗುತ್ತಾಳೆ. ಅವಳು B.com. ಓದುವಾಗ ಗೋಪಾಲ ಎಂಬ ಹುಡುಗನನ್ನು ಪ್ರೀತಿಸಿದಳು. ಅವನು ಪ್ರತಿಭಾವಂತ ಇಂಜನಿಯರ್. ಹೀಗೆ ಅವರ ಪ್ರೀತಿ 3 ವರ್ಷಗಳ ಕಾಲ ನಡೆಯಿತು. ಗೋಪಾಲನು ಮಾದೇವಿಗೆ ವೈಯಕ್ತಿಕವಾಗಿ ಹಾಗು ಕುಟುಂಬಕ್ಕೆ ಬೇಕಾದಷ್ಟು ಸಹಾಯ ಮಾಡುತ್ತಿದ್ದ. ಇವರಿಬ್ಬರ ಮದುವೆಯ ವಿಚಾರ ಊರಿನ ಜನರಿಗೆಲ್ಲಾ ಗೊತ್ತಿತ್ತು. ಹೀಗೆ ಒಂದು ದಿನ ಗೋಪಾಲನ ತಾಯಿ ಮಗನ ಹತ್ತಿರ ಮದುವೆ ವಿಚಾರ ಮಾತನಾಡಿದಳು. ಆಗ ಗೋಪಾಲ ಮಾಧವಿಯ ಎಲ್ಲಾ ವಿಚಾರವನ್ನು ತಾಯಿಗೆ ತಿಳಿಸಿದ. ಆಗ ಗೋಪಾಲನ ತಾಯಿ ಮಾಧವಿಯನ್ನು ಮದುವೆ ಆದರೆ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ನಾವು ಆಗರ್ಭ ಶ್ರೀಮಂತರು. ಆ ದಡ್ಡ ಹುಡುಗಿಯನ್ನು ಮದುವೆ ಆದರೆ ನಮ್ಮ ಗೌರವ ಕಡಿಮೆ ಆಗುತ್ತೆ ಎಂದು ಗದರಿಸಿದರು. ಇನ್ನು ನಾನು ಮಾಧವಿಯನ್ನು ಮದುವೆ ಆದರೆ ತನ್ನ ತಾಯಿ ತನಗೋಸ್ಕರ ಪ್ರಾಣತೆಗೆದುಕೊಳ್ಳುತ್ತಾಳೆ ಎಂಬ ಭಯದಿಂದ ಮಾಧವಿಯನ್ನು ಬಿಟ್ಟು ಬೇರೆ

ಯುವಳನ್ನು ಮದುವೆ ಆಗಿ ಅಮೇರಿಕಾಕ್ಕೆ ಹೊರಟು ಹೋದ. ಆದರೆ ಮಾಧವಿಯ ಮುಂದಿನ ಗತಿ ಏನು ? ಒಬ್ಬ ಹೆಣ್ಣಾಗಿ ಇನ್ನೊಂದು ಹೆಣ್ಣಿನ ನೋವಿನ ಪರಿಸ್ಥಿತಿ ಅರ್ಥ ಆಗಲಿಲ್ವಾ ? ಅದಕ್ಕೆ ಹೇಳುತ್ತಾರಲ್ಲ ಹೆಣ್ಣು ಹೆಣ್ಣಿಗೆ ಶತ್ರು ಅಂತ ಹೀಗೆ ಎಷ್ಟೋ ಘಟನೆಗಳು ನಡೆಯುತ್ತೆ. ಯಾವಾಗ ಹೆಣ್ಣಿಗೆ ಆಗಲಿ ಗಂಡಿಗೆ ಆಗಲಿ ಸ್ವಂತ ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ವತಂತ್ರ ಇರಲ್ವೋ ಆಗ ಎಲ್ಲಾ ಘಟನೆಗಳು ಹೀಗೆ ನಡೆಯುತ್ತೆ. 

# ದುಡಿಯುವ ಮಹಿಳೆಯ ಶೋಷಣೆ

ತಮಗಿರುವ ಅಧಿಕಾರವನ್ನು ಬಳಸಿಕೊಂಡು ತಮ್ಮ ಕೈ ಕೆಳಗೆ ಕೆಲಸ ಮಾಡುವ ಸ್ತ್ರೀಯರನ್ನು ಹಿಂಸಿಸುವುದು, ಶೋಷಿಸುವುದು ಇತ್ತೀಚಿನದಲ್ಲ. ಮಹಿಳೆಯರು ಕೆಲಸ ಮಾಡುವ ಸ್ಥಳಗಳಲ್ಲಿ ಲೈಂಗಿಕ ಹಿಂಸೆ, ಲೈಂಗಿಕ ಸನ್ನೆಗಳು, ಹಿಂಸಾತ್ಮಕ ನೋಟ ಮುಂತಾದ ಮಾನಸಿಕ ಒತ್ತಡಗಳಿಗೆ ಒಳಗಾಗುವ ಘಟನೆಗಳು ತೀವ್ರ ಗತಿಯಲ್ಲಿ ಹೆಚ್ಚುತ್ತಿವೆ. ಇಂತಹ ಹಿಂಸೆಗೆ ಒಳಗಾಗುವ ಮಹಿಳೆಯರು ನ್ಯಾಯ ಕೇಳಿ ಪೊಲೀಸ್ ಸ್ಟೇಷನ್‌ಗಾಗಲಿ, ನ್ಯಾಯಾಲಯಕ್ಕಾಗಲಿ ಹೋಗುವುದಿಲ್ಲ. ತಮಗಾಗುವ ಹಿಂಸೆಯನ್ನು ಪ್ರತಿಭಟಿಸುವ ದೃಷ್ಟಿಯಿಂದ ಧೈರ್ಯದಿಂದ ಒಂದೆರಡು ಹೆಜ್ಜೆ ಮುಂದಿಟ್ಟರೂ, ಸಮಾಜ ಹಾಗೂ ಪತ್ರಿಕೆಗಳು ನೀಡುವ ಪ್ರಚಾರಕ್ಕೆ ಹೆದರಿ ಹಿಂದೆ ಸರಿಯುತ್ತಾರೆ.

ಉನ್ನತ ಹುದ್ದೆಯಲ್ಲಿರುವ ಪುರುಷರು ತಮ್ಮ ಕೈಕೆಳಗೆ ಕೆಲಸ ಮಾಡುವ ಸ್ತ್ರೀಯರ ತಪ್ಪುಗಳನ್ನು ಹುಡುಕುವುದರಲ್ಲಿ ಸದಾ ಮಗ್ನರಾಗಿರುತ್ತಾರೆ. ಅಂತಹ ತಪ್ಪುಗಳು ಕಂಡು ಬಂದಾಗ ಎತ್ತಿ ತೋರಿಸುವುದು, ಕುಹಕವಾಡುವುದು, ಅವುಗಳನ್ನು ತಿದ್ದುವ ನೆಪ ಮಾಡಿಕೊಂಡು ಸನ್ನಿವೇಶವನ್ನು ದುರುಪಯೋಗ ಪಡಿಸಿಕೊಳ್ಳುತ್ತಾರೆ. ತಪ್ಪುಗಳು ಇರದಿದ್ದರೂ ಅವುಗಳನ್ನು ಹುಡುಕುತ್ತಾ, ಸಂದರ್ಭಗಳಿಗಾಗಿ ಕಾಯುತ್ತಿರುತ್ತಾರೆ. ಇಂತಹ ಸಂದರ್ಭದಲ್ಲಿ ಸ್ತ್ರೀಯರು ಸ್ವಾಭಿಮಾನಿಗಳಾಗಿ ತಮ್ಮನ್ನು ಸಮರ್ಥಿಸಿಕೊಳ್ಳತೊಡಗಿದಾಗ, ಹಿಂಸೆಯ ಸ್ವರೂಪ ಬಹುಮುಖವಾಗುತ್ತದೆ ; ಸಂಕೀರ್ಣವಾಗುತ್ತದೆ. ಇಂತಹ ಘಟನೆಗಳು, ಸಾಮಾನ್ಯವಾಗಿ ಸ್ತ್ರೀಯರ ನಡತೆಯ ಬಗ್ಗೆ ಅಪಪ್ರಚಾರ ನಡೆಸುವುದು ಇಲ್ಲವೆ ಅವಳನ್ನು ಲೈಂಗಿಕವಾಗಿ ಹಿಂಸಿಸುವುದರಲ್ಲಿ ಕೊನೆಗೊಳ್ಳುತ್ತವೆ.

ಸ್ತ್ರೀಯರ ಮೇಲೆ ನಡೆಯುವ ಲೈಂಗಿಕ ಹಿಂಸೆಯ ತೀವ್ರತೆ, ಅಧಿಕಾರದ ಶ್ರೇಣೀಕರಣದಲ್ಲಿ ಯಾವ ಸ್ಥಾನದಲ್ಲಿದ್ದಾರೆ ಎಂಬುದನ್ನು ಅವಲಂಬಿಸಿದೆ. ಅಧಿಕಾರದ ಕೆಳಹಂತದಲ್ಲಿ ಕೆಲಸ ಮಾಡುವ ಸ್ತ್ರೀಯರು ಹೆಚ್ಚಾಗಿ ಈ ರೀತಿಯ ಹಿಂಸೆಗೆ ಒಳಗಾಗುತ್ತಾರೆ. ಕೆಲಸವನ್ನು ಕಳೆದುಕೊಳ್ಳುವಭಯದಿಂದ, ಅಭದ್ರತೆಯಿಂದಾಗಿ ಇಂತಹ ಸ್ತ್ರೀಯರ ಸ್ಥಿತಿ ಶೋಚನೀಯವಾಗಿರುತ್ತದೆ.

ರಾಜಕೀಯ ವ್ಯಕ್ತಿಗಳು ತಮಗಿರುವ ಅಧಿಕಾರವನ್ನು ಉಪಯೋಗಿಸಿಕೊಂಡು ಸ್ತ್ರೀಯರನ್ನು ಹಿಂಸಿಸುವ ಘಟನೆಗಳು ಅಪರೂಪವೇನಲ್ಲ. ಮಹಾರಾಷ್ಟ್ರದಲ್ಲಿ ರಾಜಕೀಯ ವ್ಯಕ್ತಿಯೊಬ್ಬರು ಗಗನಸಖಿಯನ್ನು ಹಿಂಸಿಸಿದ್ದರಿಂದ ಶಾಸನ ಸಭೆಯಲ್ಲಿ ಕೋಲಾಹಲವೇ ನಡೆಯಿತು. ಹರಿಯಾಣದಲ್ಲಿ ರಾಜಕೀಯ ವ್ಯಕ್ತಿಯೊಬ್ಬರು ಗಗನಸಖಿಯನ್ನು ಅಸಭ್ಯವಾಗಿ ನಡೆಸಿಕೊಂಡದ್ದರಿಂದ ಪದವಿಯನ್ನು ಕಳೆದುಕೊಳ್ಳಬೇಕಾಯಿತು. ಇತ್ತೀಚೆಗೆ ಹರಿಜನ ಮಹಿಳೆಯ ಮೇಲೆ ಅತ್ಯಾಚಾರ ನಡೆಸಿದ ಘಟನೆಯು ನಮ್ಮ ಕಣ್ಣ ಮುಂದಿದೆ. ಸ್ತ್ರೀಯರಿಗೆ ನೀಡುವ ಇಂತಹ ಕಿರುಕುಳಗಳು ಇಂಡಿಯನ್ ಪೀನಲ್ ಕೋಡಿನ 345ನೆಯ ಸೆಕ್ಷನ್‌ನ ವ್ಯಾಪ್ತಿಯಲ್ಲಿ ಬರುತ್ತವೆ. ಈ ಅಪರಾಧವನ್ನು ಎಸಗುವವರು ಎರಡು ವರ್ಷ ಶಿಕ್ಷೆ, ಹಾಗೂ ದಂಡವನ್ನು ಅನುಭವಿಸಬಹುದಾಗಿದೆ.

ಸ್ತ್ರೀಯರು ದುಡಿಯುವ ಸ್ಥಳಗಳಲ್ಲಿ ನಡೆಯುವ ಲೈಂಗಿಕ ಹಿಂಸೆ, ಕಿರುಕುಳದ ಘಟನೆಗಳು ಈ ಕಾನೂನಿನಡಿಯೇ ಬರುತ್ತವೆ. ಆದರೆ ಇಂತಹ ಕೇಸುಗಳು ದಾಖಲಾಗುವುದೇ ಅಪರೂಪ. ಬೆರಳೆಣಿಕೆಯಷ್ಟು ಕೇಸುಗಳು ದಾಖಲಾಗಿದ್ದರೂ ಅಂತಹ ಸಂದರ್ಭಗಳಲ್ಲಿ ಅವರು ಕೆಲಸವನ್ನು ಕಳೆದುಕೊಂಡಿರುತ್ತಾರೆ ; ಇಲ್ಲವೇ ರಾಜೀನಾಮೆ ನೀಡಿ ಹೊರಬಂದಿರುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಸತ್ಯವನ್ನು ಸಾಬೀತು ಮಾಡುವುದೇ ದುಸ್ತರವಾಗಿ ಬಿಡುತ್ತದೆ. ಸ್ತ್ರೀಯರೇ ಅಪರಾಧಿಗಳೆಂದು ನೋಡುವಂತಹ ಸಾಮಾಜಿಕ ಮೌಲ್ಯಗಳ ನಡುವೆ ಬದುಕುತ್ತಿರುವ ಸ್ತ್ರೀಯರು ಇಂತಹ ಅಮಾನುಷತೆಯ ವಿರುದ್ಧ ದನಿ ಎತ್ತುವುದು ಸಾಧ್ಯವಾಗಬೇಕಾಗಿದೆ. 

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :

**" ಮಾನಸ "**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067